


# ಮಾದಕ ವಸ್ತುಗಳು

ಡಾ. ಕರವೀರಪ್ರಭು ಕ್ಯಾಲಕೊಂಡ




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೯೪

ಉಪನ್ಯಾಸ ಗ್ರಂಥಮಾಲೆ

೪೨೬

# ಮಾದಕ ವಸ್ತುಗಳು

ಡಾ|| ಕರವೀರಪ್ರಭು ಕ್ಯಾಲಕೊಂಡ







ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮಾರ್ಚ್, ೧೯೯೪

ಪ್ರಕಾಶಕರು : ಎಚ್. ವಿ. ನಾಗೇಶ್
ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಪ್ರಥಮ ಮುದ್ರಣ:** ೫೦೦೦ ಪ್ರತಿಗಳು
ಮಾರ್ಚ್. ೧೯೯೪



ಬೆಲೆ: ರೂ.೧.೦೦

**ಮುದ್ರಕರು:** ಶ್ರೀ ಜೆ.ಎ. ಪೆರೇರಾ
ಕಾರ್ಯನಿರ್ವಾಹಕ ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ, ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸ ಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನೀರಿಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನ ಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೪೨೫ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ ಅನೇಕ ಪುಸ್ತಿಕೆಗಳು ನಾಲ್ಕು - ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಾ. ಎಸ್. ರಾಮೇಗೌಡ
ಕುಲಪತಿಗಳು

# ನಿವೇದನೆ

ಸಾಮಾಜಿಕ ಬದುಕನ್ನೇ ಕುಲಗೆಡಿಸಿ ಭಯಂಕರವಾದ ಒಂದು ರಾಷ್ಟ್ರೀಯ ಸಾಂಕ್ರಾಮಿಕ ರೋಗವಾಗುತ್ತಿರುವ ಮಾದಕವಸ್ತು ಸೇವನೆ ಈಗಾಗಲೇ ಭಾರತದ ನಗರಗಳನ್ನು ಕಬಳಿಸತೊಡಗಿದೆ. ಸಮಾಜದ ಮಧ್ಯಮವರ್ಗ ಮತ್ತು ಕೆಳವರ್ಗದ ಜನ ಮದ್ಯಪಾನಕ್ಕೆ ಬಲಿಯಾಗುವುದೇ ಸಾಕಷ್ಟು ಆತಂಕಕಾರಿ ಹಾಗೂ ಭಯಾನಕ. ಮಾದಕವಸ್ತುಗಳ ಸೇವನೆಯ ಚಟಕ್ಕೆ ಬಲಿಯಾದಾತನಂತೂ ನಿಜವಾದ ಅರ್ಥದಲ್ಲಿ ತನ್ನ ಬದುಕಿನ ಅಂತ್ಯವನ್ನು ಆರಂಭಿಸಿರುತ್ತಾನೆ. ಮಾದಕವಸ್ತುಗಳ ಸೇವನೆಯ ಪಿಡುಗು ಕೈಮೀರಿ ಹೋಗುವ ಮುನ್ನ ಸರಕಾರ ಮತ್ತು ಜನತೆ ಜಾಗೃತವಾಗದಿದ್ದಲ್ಲಿ ಇನ್ನು ಕೆಲವೇ ವರ್ಷಗಳಲ್ಲಿ ಈ ಸಾಂಕ್ರಾಮಿಕ ರೋಗ ನಮ್ಮ ದೇಶದ ಸಣ್ಣ ಪುಟ್ಟ ಹಳ್ಳಿಗಳಿಗೂ ಹರಡಿ ನಾವು ನಮ್ಮ ಕಣ್ಮುಂದೆಯೇ ಸದಾ ಮಾರಕ ಮಾದಕವಸ್ತುಗಳ ಗುಂಗಿನಲ್ಲಿರುವ ನಿರ್ವೀರ್ಯ, ನಿರುಪಯೋಗಿ ಹಾಗೂ ಸಮಾಜಕ್ಕೆ ಅಪಾಯಕಾರಿಯಾದ ತಲೆಮಾರೊಂದರ ಕರಿನೆರಳಿನಲ್ಲಿಯೇ ಬದುಕಬೇಕಾದೀತು.

ಆಧುನಿಕ ನಾಗರಿಕತೆಯ ಕಾವೇರಿದ ನಗರಗಳಲ್ಲಿ ಮಾದಕವಸ್ತುವೆನ್ನುವುದು ಎಲ್ಲಿಲ್ಲದ ಸಂಪತ್ತನ್ನು ಹಾಗೂ ವಿಪತ್ತನ್ನು ತರುವ ತಡೆಯಲಾರದ ಭಯಂಕರ ಆಕರ್ಷಣೆಯಾಗಿದೆ. ಮಾದಕವಸ್ತು ವ್ಯಕ್ತಿಯ ಮಾನವೀಯ

ಗುಣಗಳನ್ನು ಅಳಿದು, ಅಸುರೀ ಶಕ್ತಿಯನ್ನು ಉದ್ರೇಕಿಸಿ ಹೀನ ಅಪರಾಧಗಳನ್ನು ಮಾಡಲು ಪ್ರಚೋದಿಸುವ ಭಯಂಕರ ಸಾಧನವಾಗಿದೆ. ಇದಕ್ಕೆ ತನ್ನದೇ ಆದ ಬಹುದೊಡ್ಡ ಚರಿತ್ರೆಯಿದೆ. ಅನಾದಿ ಕಾಲದಿಂದ, ಇಂದಿನವರೆಗೆ ಅದರ ಆಕರ್ಷಣೆ ಚೆಲ್ಲಾಟ ನಿರಂತರವಾಗಿ ನಡೆದಿದೆ. ಮನುಷ್ಯನ ನೋವಿಗೆ, ನರಳಿಕೆಗೆ, ದುಃಖ ದುಮ್ಮಾನಗಳಿಗೆ ಅವು ಯಕ್ಷಣೀ ಪರಿಹಾರವೆಂಬ ಭ್ರಮೆ ಬಹು ಜನರಲ್ಲಿದೆ. ಗಾಳ ಹಾಕಿ ಆಸೆ ತೋರಿಸಿ ಮೀನು ಹಿಡಿವಂತೆ ಮತ್ತು ಬರಸಿ, ಅಮಲು ಏರಿಸಿ ಈ ವಸ್ತುಗಳು ನಮ್ಮನ್ನು ತಮ್ಮ ಆಕ್ಟೋಪಸ್ ಹಿಡಿತಕ್ಕೆ ಸಿಕ್ಕಿಸಿಕೊಳ್ಳುತ್ತವೆ. ಹೇಳಿದಂತೆ ಕೇಳುವ, ಆಡಿಸಿದಂತೆ ಆಡುವ ಗುಲಾಮರನ್ನಾಗಿ ಮಾಡಿಕೊಳ್ಳುತ್ತದೆ. ನಿಧಾನವಾಗಿ, ಅಣು ಅಣುವಾಗಿ ಗೊತ್ತಿಲ್ಲದಂತೆ ನಮ್ಮನ್ನು ಕೊಲ್ಲುತ್ತವೆ. ಈಗಾಗಲೇ ಲಕ್ಷಾಂತರ ಜನರನ್ನು ಕೊಂದಿದೆ. ಮಾದಕವಸ್ತುಹೆಮ್ಮಾರಿಯನ್ನು ಹೊಡೆದೋಡಿಸುವುದು ಸುಲಭದ ಕೆಲಸವಲ್ಲ. ಆದರೂ ಸಮಾಜ ಶಾಸ್ತ್ರಜ್ಞರು, ವೈದ್ಯರುಗಳು ಮತ್ತು ನಮ್ಮ ನಾಯಕರೆನಿಸಿಕೊಂಡವರು ಉದಾಸೀನತೆ ತೋರಬಾರದ ಅತ್ಯಂತ ತುರ್ತಿನ ಸಮಸ್ಯೆ ಇದಾದ್ದರಿಂದ ನಮ್ಮ ನಗರಗಳ ಹದಿಹರೆಯದ ಹುಡುಗರ, ಯುವಕರ ಭವಿಷ್ಯದ ದೃಷ್ಟಿಯಿಂದ ಮಾದಕವಸ್ತು ಯಾವುದೇ ರೂಪದಲ್ಲಿ ನಮ್ಮ ಸಣ್ಣಪುಟ್ಟ ಹಳ್ಳಿಗಳನ್ನು, ಪೇಟೆ ಪಟ್ಟಣಗಳನ್ನು ಪ್ರವೇಶಿಸದಂತೆ ತಡೆಯಬೇಕಾದದ್ದು ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಕನಸು ಕಾಣುವ ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಿದೆ.

ಬೆಳಗಾಂವ ಜಿಲ್ಲೆಯ ಚಿಕ್ಕುಂಬಿಯಲ್ಲಿ ಶ್ರೀ ಅಜಾತನಾಗ ಲಿಂಗೇಶ್ವರ ದೇವಸ್ಥಾನ ಟ್ರಸ್ಟ್ ಕಮೀಟಿ ಆಶ್ರಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗದ ೩೮೭ನೆಯ ಶಿಬಿರದಲ್ಲಿ ನಾನು ಮಾದಕವಸ್ತುಗಳ ಬಗ್ಗೆ ಉಪನ್ಯಾಸವಿತ್ತಿದೆ. ಅಂದು ಮಾಡಿದ ಉಪನ್ಯಾಸದ ಸಾರವು ಇಂದು ಈ ಚಿಕ್ಕ ಹೊತ್ತಿಗೆಯ ರೂಪದಲ್ಲಿ ಹೊರಬರುತ್ತಲಿದೆ. ಇದು ಸಾಧ್ಯವಾಗುವಂತೆ ಮಾಡಿದ ಪ್ರಸಾರಾಂಗದ ಆಗಿನ ನಿರ್ದೇಶಕರಾಗಿದ್ದ ಶ್ರೀ ಎಸ್.ಬಿ. ನಾಯಕ, ಈಗಿನ ನಿರ್ದೇಶಕರಾದ ಶ್ರೀ ಸದಾನಂದ ಕನವಳ್ಳಿ ಹಾಗೂ ಉಪನ್ಯಾಸ ನೀಡಲು ಹುರುಪು ಹುಮ್ಮಸ್ಸು ತುಂಬಿದ ಶ್ರೀ ಈಶ್ವರ ಕಮ್ಮಾರ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಮಾದಕವಸ್ತುಗಳ ಬಗ್ಗೆ ತಿಳಿದಿರುವ ಸಂಗತಿಗಳನ್ನೆಲ್ಲಾ ಬರೆಯಲು ಸಾಧ್ಯವಾಗಿಲ್ಲ. ನನಗೆ ತಿಳಿದ ಮಹತ್ವದ ವಿಷಯಗಳನ್ನು ಸಾಧ್ಯವಾದಷ್ಟು ಸರಳ ಭಾಷೆಯಲ್ಲಿ ವಿವರಿಸಲು ಪ್ರಯತ್ನಿಸಿರುವೆನು. ಆ ವಿಷಯದಲ್ಲಿ ನನಗಿಂತಲೂ ಹೆಚ್ಚು ಜ್ಞಾನ ಪಡೆದವರು ನಾನು ಮಾಡಿರಬಹುದಾದ ತಪ್ಪುತಡೆಗಳನ್ನು ಸೂಚಿಸಬೇಕೆಂದು ವಿನಯದಿಂದ ಪ್ರಾರ್ಥಿಸುವೆನು.

ಪಟ್ಟದಕಲ್ **ಡಾ || ಕರವೀರಪ್ರಭು ಕ್ಯಾಲಕೊಂಡ**

# ಪರಿವಿಡಿ

# ಪೀಠಿಕೆ

ಮಾನವ ಆನಂದದ ಆರಾಧಕ ಮತ್ತು ಅನ್ವೇಷಕ. ಅವನಲ್ಲಿ ಆನಂದದ ಪರಮಾವಧಿ ತಲುಪುವ ತವಕ. ತಾನು ಸಾಧಿಸುವ ಪ್ರತಿಯೊಂದು ಕಾರ್ಯಗಳೂ ಆನಂದ ಪಡೆಯುವುದಕ್ಕಾಗಿಯೇ ಎಂಬ ಭಾವುಕ. ಎಷ್ಟೋ ವಿಷಯಗಳನ್ನು ಕಂಡುಹಿಡಿದರೂ ತೃಪ್ತನಾಗದ ಮಾನವ ಕೊನೆಗೊಂದು ವಸ್ತುವನ್ನು ಸಂಪಾದಿಸಿಯೇ ಬಿಟ್ಟ. ಅದೇ ಮಾದಕ ವಸ್ತು. ಅಂದು ಅದು ಮಾನವನಿಗೊಂದು ಹೊಸ ಸ್ವರ್ಗೀಯ ಅನುಭವನ್ನೇ ತೆರೆದಿಟ್ಟಿತು.

## ಒಂದು ನೀತಿ ಕತೆ

ಒಂದು ಊರಲ್ಲಿ ಒಬ್ಬ ವ್ಯಕ್ತಿ ಇದ್ದ. ಸತ್ಯವಂತ. ನೀತಿವಂತ. ನಿಯಮವಂತನಾಗಿದ್ದ. ಸಜ್ಜನರಿಗೆ ಸಂಕಷ್ಟಗಳೂ, ಸತ್ವಪರೀಕ್ಷೆಗಳೂ ಬಹಳ ಎಂಬುದು ಸುಳ್ಳಲ್ಲ. ದಟ್ಟದಾರಣ್ಯದಲ್ಲಿ ಹೋಗುವಾಗ ಪೇಚಿಗೆ ಸಿಕ್ಕಿಕೊಳ್ಳುತ್ತಾನೆ. ಕಣ್ಣು ಕುಕ್ಕುವ ವಜ್ರವೈಡೂರ್ಯಗಳ ರಾಶಿ ಕಾಣುತ್ತಾನೆ. ಕ್ಷಣ ಹೊತ್ತು ಸ್ತಂಭೀಭೂತನಾಗುತ್ತಾನೆ. ಭಯ, ಭೀತಿಗಳ ಬಂಧನದಲ್ಲಿ ತಲ್ಲಣಗೊಳ್ಳುತ್ತಾನೆ. ಅಶರೀರವಾಣಿಯಾಗುತ್ತದೆ. ಮೂರು ಪ್ರಶ್ನೆಗಳನ್ನು ಅವನ ಮುಂದಿಡುತ್ತದೆ.

೧. ಮಾದಕ ವಸ್ತುಗಳ ಸೇವನೆ ಮಾಡು?

೨. ಸುರಸುಂದರಿಯ ಅಂಗ ಸಂಗ ಮಾಡು?

೩. ಕಣ್ಮುಂದೆ ಕಾಣುವ ವಜ್ರ, ವೈಡೂರ್ಯಗಳ ಕಳವು ಮಾಡು?

ಈ ಮೂರರಲ್ಲಿ ಒಂದನ್ನಾದರೂ ಮಾಡಲೇಬೇಕು? ಎಂಬ ಕಟ್ಟಪ್ಪಣೆಯಾಗುತ್ತದೆ. ವ್ಯಕ್ತಿ ಚಿಂತಿತನಾಗುತ್ತಾನೆ. ವಿಚಾರ ಮಾಡುತ್ತಾನೆ. ಕಳವು ಮಾಡುವುದು ಮಹಾಪರಾಧ. ಹೆಣ್ಣಿನ ಸಂಗ ಮಾಡುವುದು ಚಾರಿತ್ರ್ಯದ ತೇಜೋವಧೆಮಾಡಿದಂತೆ. ಮತ್ತಿನ ವಸ್ತು ಸೇವಿಸಿ, ಕ್ಷಣಹೊತ್ತು ವಿರಮಿಸಿ ಮುಂದೆ ಹೋದರಾಯ್ತು. ಇದರಿಂದ ಅತ್ಯಂತ ಕಡಿಮೆ ಅಪರಾಧವೆಸಗಿ ದಂತಾಗುತ್ತದೆ ಎಂದು ನಿರ್ಣಯಿಸುತ್ತಾನೆ. ಮಾದಕ ವಸ್ತು ಸೇವನೆ ಮಾಡುತ್ತಾನೆ. ಅದು ಕೊಟ್ಟ ಸುಖಕ್ಕೆ ಮರುಳಾಗುತ್ತಾನೆ. ಮರುಳಾಗಿ ಆ ಸುಖದ ಸುತ್ತ ಗಸ್ತು ಹೊಡೆಯುತ್ತಾನೆ. ನಿಶೆಯ ಗುಂಗಿನಲ್ಲಿ ನೀತಿ ನಿಯಮಗಳ ಮರೆಯುತ್ತಾನೆ. ಹೆಣ್ಣಿನ ಸಂಗ ಮಾಡುತ್ತಾನೆ. ಮತ್ತಿನ ವಸ್ತು ಸಿಗದಾಗ ಕಳವು ಮಾಡಿ ಸೇವಿಸುತ್ತಾನೆ. ಮತ್ತಿನ ವಸ್ತು ಸೇವನೆಯೇ 'ದೊಡ್ಡ ಅಪರಾಧ' ಎಂಬುದು ಆ ಮೇಲೆ ಅರುವಿಗೆ ಬರುತ್ತದೆ. ಅದು ಎಲ್ಲ ಕೆಟ್ಟ ಚಟಕ್ಕೆ ನಾಂದಿಹಾಡುವುದು ಎಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ ಎಂಬುದು ಸ್ಫಟಿಕದಷ್ಟೇ ಸ್ಪಷ್ಟ.

ಸುಖ, ಶಾಂತಿ, ಆನಂದ ಮಾನವ ಜೀವನದ ಪ್ರಬಲ ಆಸೆಗಳು, ಆಕರ್ಷಣೆಗಳು. ಸುಖ ಪಡುವುದು ಮನುಷ್ಯನ

ಹುಟ್ಟಾಸೆ ಎಂದಿದ್ದಾನೆ ಪ್ರಸಿದ್ಧ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್. ಆದರ ಸುತ್ತ ಆಸೆಯ ಬಲೆಯನ್ನು ನೇಯುತ್ತಾ, ಯೋಜನೆಗಳನ್ನು ಹಾಕಿ ಹಮ್ಮುತ್ತ. ಅತೀ ಕಡಿಮೆ ಕ್ರಮದಲ್ಲಿ ಅತಿ ಹೆಚ್ಚು ಸುಖ ಅನುಭವಿಸಲು ಪ್ರತಿಯೊಬ್ಬ ಜೀವಿ ತನ್ನ ಜೀವಿತವನ್ನೇ ಮುಡುಪಾಗಿಡುತ್ತಾನೆ.

ದೈನಂದಿನ ಜೀವನದ ಕಷ್ಟನಷ್ಟಗಳ, ನೋವು ನಿರಾಶೆಗಳ, ಏಕಾಕಿತನ, ಅನಾಥಪ್ರಜ್ಞೆ, ಕೈಗೆಟುಕದ ಪ್ರೀತಿಯ ಮರೀಚಿಕೆ, ಹುಸಿಯಾಗುತ್ತಿರುವ ಮಾನವೀಯ ಮೌಲ್ಯಗಳ ಸಂಬಂಧಗಳ ಬಂಧನಗಳಿಂದ ಬಿಡುಗಡೆಯಾಗಿ ದೂರ ಬಹುದೂರ ಸಾಗಲು. ಅರಗಳಿಗೆ ಮರೆಯಲು, ಮರೆತು ಮೆರೆದಾಡಲು 'ಮುಕ್ತತೆ'ಯ ಅನುಭವ ಪಡೆಯಲು, ಜಗತ್ತಿನ ಸಂಬಂಧ ಸಡಿಲಿಸಿಕೊಂಡು ಸಿಮೋಲಂಘನ ಮಾಡಿ, ಶೂನ್ಯಸ್ಥಿತಿಯಲ್ಲಿ ಸಂತೋಷದಿಂದ ಸಮಯ ಕಳೆಯಲು ಮಾದಕ ವಸ್ತುಗಳ ಸೀಮೆಯಲ್ಲಿ ಸಿಕ್ಕು ಶರಣಾಗತರಾಗುವರು. ವಂಚನೆಯಿಲ್ಲದ, ಜಾತಿಭೇದಗಳಿಲ್ಲದ, ಮೇಲುಕೀಳುಗಳಿಲ್ಲದ, ಜನಿವಾರ ಶಿವದಾರಗಳಿಲ್ಲದ ಸೆರೆಮನೆಯಲ್ಲಿ ನಿಧಾನ ಸಾವಿನ ಸುಳಿಯಲ್ಲಿ ಗಿರಕಿ ಹೊಡೆಯುವರು. ಹೊರಬರಲು ಹಾದಿ ಕಾಣದೆ ಹೊರಳಾಡುವರು. ಏಲಿ ಏಲಿ ಒದ್ದಾಡುವರು.

ಅಮಲಿನ ಅಲ್ಪ ಸುಖಕ್ಕೆ ಮರುಳಾಗಿ ಜೀವನ ಪರ್ಯಂತ ಗೋಲಾಕಾರದ ಗೋಳಚಲ್ಲಿ ಗೋಳಾಡುವರು.

ಮತ್ತಿನ ಓರಿಯುಂಡವಗೆ। ಉರಿಯ ಮೇಲುಡುಕುವಗೆ
ಪರಿಯುವ ಹಾವ ಪರನಾರಿ। ಪಡಿದಂಗೆ
ಮರಣದ ನೆರಳು ಸರ್ವಜ್ಞ.

ಎಂದು ದಾರ್ಶನಿಕ ಕವಿ ಹೇಳಿರುವ ಮಾತುಗಳು ಎಷ್ಟೊಂದು ಅರ್ಥಪೂರ್ಣವಾಗಿದೆಯಲ್ಲವೇ?

## ಮಾದಕ ಔಷಧಿಯ ಹುಟ್ಟು

ಪ್ರಾಚೀನ ಶೋಧ ಶಾಸ್ತ್ರದ ಪ್ರಕಾರ ಮತ್ತಿನ ಔಷಧಿಗಳಿಗೆ ಕ್ರಿ.ಪೂ. ೪೦೦೦ ವರ್ಷಗಳಷ್ಟು ದೀರ್ಘ ಇತಿಹಾಸವಿದೆ. ಸ್ವಿಸ್ ಸರೋವರದ ಬಳಿ ವಾಸಿಸುತ್ತಿದ್ದ ಶಿಲಾಯುಗದ ಜನರು ಪೋಪ್ಪಿ ಸಸ್ಯಗಳನ್ನು ಬೆಳೆಸುತ್ತಿದ್ದರು. ಪೋಪ್ಪಿ ಸಸ್ಯ ಮತ್ತುಬರಿಸುವ ಗುಣದ ಹಾಲುಳ್ಳ ಒಂದು ಸಸ್ಯ ಜಾತಿ. ತಮ್ಮ ಆಸರ ಬೇಸರ ಕಳೆಯಲು, ಋಷಿಯ ಕನಸು ಕಾಣಲು ಪೋಪ್ಪಿ ಸಸ್ಯದ ಹಾಲ್ರಸ ಕುಡಿಯುತ್ತಿದ್ದರು.

ಚಾರಿತ್ರಿಕ ಅಂಶಗಳು ತಿಳಿಸುವಂತೆ ಕೋಕಾ ಗಿಡದ ಎಲೆಗಳ್ಳು ಜಗಿಯುವುದು ದಕ್ಷಿಣ ಅಮೇರಿಕಾದ ಜನರಲ್ಲಿ ಬಹಳ ಸಾಮಾನ್ಯವಾಗಿತ್ತು. ಅಲ್ಲಿನ ಪ್ರಾಚೀನ ಶಿಲ್ಪಾಕೃತಿಗಳಲ್ಲಿ ಉಬ್ಬಿಕೊಂಡಿರುವ ಕೆನ್ನೆ ಕೋಕಾ ಎಲೆಗಳನ್ನು ಬಾಯಿಯೊಳಗೆ ತುಂಬಿಕೊಂಡಿರುವುದನ್ನು ಸಂಕೇತಿಸುತ್ತದೆ.

ಬ್ಯಾಬಿಲೋನಿಯನ್ನರು ತಮ್ಮ ಕಾಲದಲ್ಲಿ ಓಪಿಯಂ ಮಾತ್ರೆಗಳು ಬಳಕೆಯಲ್ಲಿದ್ದವು ಎನ್ನುವುದಕ್ಕೆ ಕೆಲವು ಪುರಾವೆಗಳನ್ನು ಬಿಟ್ಟು ಹೋಗಿದ್ದಾರೆ. ಲಂಡನ್‌ನ ವೈಜ್ಞಾನಿಕ ಮ್ಯುಜಿಯಂನಲ್ಲಿ ಅಂದು ಪ್ರಸಿದ್ಧವಿದ್ದ ಕುಂಬ ಕಲೆಯ ಕೆಲವು ಸ್ಯಾಂಪಲ್‌ಗಳಿವೆ. ಇವುಗಳಲ್ಲಿ ಕೆಲವು ಪಾತ್ರೆಗಳು ಪೋಪ್ಪಿಗಿಡದ ಒಣಗಿದ ಬೀಜಕೋಶದ ಆಕಾರವನ್ನು ಹೊಂದಿದೆ. ಇವು ಕಂದು ಕಂಚಿನಿಂದ ಮಾಡಲ್ಪಟ್ಟವು. ಕ್ರಿ.ಪೂ. ೧೫೦೦ರ ಕಾಲದವುಗಳಾಗಿವೆ. ಈ ಪಾತ್ರೆಗಳಲ್ಲಿ ಓಪಿಯಂ ಮಾತ್ರೆಗಳನ್ನು ಕರಗಿಸಿದ ನೀರನ್ನು ತುಂಬಿಸಿ ಈಜಿಪ್ತ ದೇಶಕ್ಕೆ ರವಾನಿಸುತ್ತಿದ್ದರು. ಕೆಲ ಸಮಯದಲ್ಲಿ ಈಜಿಪ್ತಿಯನ್ನರೂ ಓಪಿಯಂ ಬೆಳೆಸುವುದನ್ನು ಕಲಿತರು. ಈಜಿಪ್ತಿನ ಆರ್ಟಿ ಫ್ಯಾಕ್ಟಗಳಲ್ಲಿ ಇದಕ್ಕೆ ಸಂಬಂಧಿಸಿದ ಪುರಾವೆಗಳೂ ದೊರೆತಿವೆ.

ಓಂದೆ ಪಾಶ್ಚಿಮಾತ್ಯ ದೇಶಗಳ ವೈದ್ಯರು ಓಪಿಯಂ ರಸವನ್ನು ನೋವು ನಿವಾರಕವಾಗಿ ಉಪಯೋಗಿಸುತ್ತಿದ್ದರು. ಓಪಿಯಂ ರಸಕ್ಕೆ 'ನೆಟ್ಲ' ಗಿಡದ ಬೀಜಗಳನ್ನು ಸೇರಿಸುವುದರಿಂದ ಅದರ ಅಮಲಿನ ಗುಣವನ್ನು ಹೆಚ್ಚಿಸುತ್ತಿದ್ದರು.

ಅಂದು ಓಪಿಯಂ ಮತ್ತು ಕೊಕೇನ್ ಡ್ರಗ್‌ಗಳ ಬಳಕೆ ಅವು ಬೆಳೆಯುತ್ತಿದ್ದ ಪ್ರದೇಶಗಳಿಗೆ ಮಾತ್ರವೇ ಸೀಮಿತವಾಗಿದ್ದವು. ಅಂದಿನ ದುರ್ಬಲ ಸಂಪರ್ಕ, ಸಾಗಾಣಿಕೆ, ಸಂವಹನ ಮಾಧ್ಯಮದಿಂದಾಗಿ ಇವು ಇತರ ದೇಶಗಳಿಗೆ ಹಬ್ಬುವುದು ನಿಧಾನವಾಗಿತ್ತು. ೧೯ನೇ ಶತಮಾನದ ವರೆಗೂ ಕೋಕಾ ಎಲೆಗಳ

ಬಳಿಕೆ ಪೆರು, ಚೈಲ್ ಮತ್ತು ಬೊಲಿವಿಯಾಗಳಿಂದ ಹೊರಗೆ ಹರಡಲೇ ಇಲ್ಲ. 'ಓಪಿಯಂ' ಪ್ರಪಂಚದಲ್ಲಿಡೀ ಹರಡುವುದಕ್ಕೆ ಬಹಳ ಸಮಯವೇ ಓಡಿಯಿತು.

"೧೬ನೇ ಶತಮಾನದಲ್ಲಿ ಟರ್ಕಿಯಲ್ಲಿ ಓಪಿಯಂ ಕೊಳ್ಳದ ವ್ಯಕ್ತಿಯೇ ಇರಲಿಲ್ಲ. ಪ್ರತಿಯೊಬ್ಬನೂ ತನ್ನಲ್ಲಿಯ ಕೊನೆಯ ಪೆನ್ನಿ ಇರುವವರೆಗೂ ಓಪಿಯಂಗಾಗಿ ಹಾತೊರೆಯುತ್ತಿದ್ದ. ಯುದ್ಧವೇ ಇರಲಿ, ಶಾಂತಿಯೇ ಇರಲಿ, ಈ ಮತ್ತಿನ ಪದಾರ್ಥ ಪ್ರತಿಯೊಬ್ಬನಲ್ಲಿಯೂ ಕೊನೆಯ ಉಸುರಿನ ವರೆಗೆ ಜೊತೆಯಲ್ಲಿರುತ್ತಿದ್ದವು" ಎಂದಿದ್ದಾನೆ ಫ್ರೆಂಚ್ ನ್ಯಾಚುರಾಲಿಸ್ಟ, ಬೆಲೊನ್.

೧೭ನೇ ಶತಮಾನದಲ್ಲಿ ಯುರೋಪ್‌ನ ಜನರು ಓಪಿಯಂ ತಮ್ಮೆಲ್ಲ ಅಸೌಖ್ಯವನ್ನು ದೂರ ಮಾಡಲು ದೇವರಿಂದ ಬಂದ ಪ್ರಸಾದ ಎಂದೇ ಭಾವಿಸಿದ್ದರು. ಆ ಸಮಯದಲ್ಲಿ ಸಿಫಿಲಿಸ್ ರೋಗವು ಇಂಗ್ಲಂಡ್‌ದಲ್ಲಿ ತನ್ನ ಭಯಾನಕತೆಯನ್ನು ತೋರಿಸಿತ್ತು. ಯಾವುದೇ ನಿಶ್ಚಿತ ಚಿಕಿತ್ಸೆ ಸಾಧ್ಯವಿಲ್ಲದ ಆ ಸಮಯದಲ್ಲಿ ಸಿಫಿಲಿಸ್ ರೋಗಿಗಳು ಓಪಿಯಂನ್ನೇ ನಂಬಿದ್ದರು. ಅದನ್ನೇ ಮದ್ದೆಂದು ಸೇವಿಸುತ್ತಿದ್ದರು.

೧೯ನೇ ಶತಮಾನದಲ್ಲಿ ಇವುಗಳ ಪ್ರಭಾವ ಎಷ್ಟಿತ್ತು? ಲಭ್ಯವಿರುವ ಸಾಹಿತ್ಯ ಇದಕ್ಕೆ ಪುರಾವೆಗಳನ್ನು ಒದಗಿಸುತ್ತದೆ. ಅಂದು ಬುದ್ಧಿಜೀವಿಗಳೆನಿಸಿಕೊಂಡವರೆಲ್ಲಾ ಓಪಿಯಂ

ದಾಸರಾಗಿದ್ದರು. ತಮ್ಮ ಬುದ್ಧಿಶಕ್ತಿಯನ್ನು ಜಾಗೃತವಾಗಿಡಲು ಅವರಿಗದು ಬೇಕೇಬೇಕಿತ್ತು. ಅವರು ತಾವಷ್ಟೇ ಅದನ್ನು ಸೇವಿಸುತ್ತಿರಲಿಲ್ಲ. ಸಹೋದ್ಯೋಗಿಗಳಿಗೂ, ಸ್ನೇಹಿತರಿಗೂ ಇದರ ರುಚಿಯುಣ್ಣಿಸಿದರು. ಯುರೋಪ ಮತ್ತು ಅಮೇರಿಕಾದ ಬುದ್ಧಿಜೀವಿಗಳಾದ ಥ.ಾಮಸ್. ಡಿ. ವಿನ್ಸಿ, ಬಾಡಿಲೇರಿ. ವಿಲಿಯಂ ಬ್ಲೇರ್, ಫ್ರಾಯ್ಡ ಮತ್ತು ಟೇಲರ್ ಇವರೆಲ್ಲಾ ಮಾದಕ ವಸ್ತುಗಳನ್ನು ಸೇವಿಸಿ ಅನಂತರದ ಅನುಭವಗಳನ್ನು ಬರೆದಿದ್ದಾರೆ.

ಕವಿ ವಿಲಿಯಂ ಬ್ಲೇರ್‌ನದು ಅತಿ ಸೂಕ್ಷ್ಮ ದೇಹ ಪ್ರಕೃತಿ. ಮೊದಲು ಈತ ದೇಹಶಕ್ತಿಗಾಗಿ ಮತ್ತಿನ ಔಷಧಿ ಸೇವಿಸಿದ. ದೇಹ ಚುರುಕಾದಂತೆ ಅನಿಸತೊಡಗಿತು. ವ್ಯಾಯಾಮ ಮಾಡುವುದು. ಹಾಡುವುದು, ನರ್ತಿಸುವುದು ಸಾಧ್ಯವಾಯಿತು. ಮುಂದೆ ಈ ಚಟ ಬಹುವಾಗಿ ಅಂಟಿಕೊಂಡಿತು ಬೆಳೆಯಿತು. ಅಂತೆಯೇ ಸಮಸ್ಯೆಗಳೂ ಎದುರಾದವು. ಮೈ ಉರಿಯುವಿಕೆ, ಅತಿಬಾಯಾರಿಕೆ ಬೆಳಗಿಂದ ರಾತ್ರಿಯವರೆಗೂ ಮುಂದುವರೆಯಿತು. ಚರ್ಮ ಸುಕ್ಕುಗಟ್ಟಿತು. ಕಣ್ಣುಗಳು ತೀಕ್ಷ್ಣತೆಯನ್ನು ಕಳೆದುಕೊಂಡವು. ಜತೆಗೆ ಸಹಿಸಲಸಾಧ್ಯ ತಲೆನೋವು ಪ್ರಾರಂಭವಾಯಿತು. ತನ್ನ ಈ ಅನುಭವಗಳನ್ನು "ಆ್ಯನ್ ಓಪಿಯಂ ಈಟರ್ ಇನ್ ಅಮೇರಿಕಾ" ಎನ್ನುವ ಪುಸ್ತಕದಲ್ಲಾತ ಬರೆದಿದ್ದಾನೆ.

ಜರ್ಮನ್ ಫಾರ್ಮಾಸಿಸ್ಟ್ ಎಫ್. ಸರ್ಟರ್ನರ್ ಎಂಬಾತ ಓಪಿಯಂನಿಂದ ಮಾರ್ಫಿನ್‌ನನ್ನು ಶೋಧಿಸಿದ. ಗ್ರೀಸನ

ಕನಸುಗಳ ದೇವತೆ, 'ಮಾರ್ಫಿಯಸ್.' ಜನರನ್ನು ಕನಸುಗಳಲ್ಲಿ ಮುಳುಗಿಸುವ ವಸ್ತುವಾದ್ದರಿಂದ ತನ್ನ ಸಂಶೋಧನೆಯನ್ನಾತ 'ಮಾರ್ಫಿನ್' ಎಂದು ಕರೆದ. ೧೮೫೩ರಲ್ಲಿ ಚರ್ಮದ ಕೆಳಗೆ ಚುಚ್ಚಲು ಸಾಧ್ಯವಾಗುವ ಸೂಜಿಗಳು ಬೆಳಕಿಗೆ ಬಂದವು. ಜನರೀಗ ಮಾರ್ಫಿನ್‌ನನ್ನು ನೇರವಾಗಿ ರಕ್ತನಾಳಗಳಿಗೇ ಚುಚ್ಚಿಸಿಕೊಳ್ಳಲು ಪ್ರಾರಂಭಿಸಿದರು. ಮಾರ್ಫಿನ್ ಓಪಿಯಂಗಿಂತಲೂ ಹೆಚ್ಚು ಪರಿಣಾಮಕಾರಿ.

ಅಮೇರಿಕಾದಲ್ಲಿ ಸಿವಿಲ್ ಯುದ್ಧ ಪ್ರಾರಂಭವಾದ ಸಮಯ. ಯೋಧರೆಲ್ಲಾ ಮಾರ್ಫಿನ್‌ನನ್ನು ಅತಿಯಾಗಿ ಚುಚ್ಚಿಕೊಳ್ಳುತ್ತಿದ್ದರು. ಹೀಗಾಗಿ ಮಾರ್ಫಿನ್ ಚಟಕ್ಕೆ "ಆರ್ಮಿಡಿಸೀಜ" ಎಂಬ ಹೆಸರೇ ಬಂತು.

೧೯ನೇ ಶತಮಾನದ ಕೊನೆಯಲ್ಲಿ ಕೋಕಾ ಎಲೆಗಳಿಂದ ಪಡೆದ ಕೊಕೇನ್ ವೈದ್ಯಕೀಯ ಕ್ಷೇತ್ರದಲ್ಲಿ ತನ್ನ ಸ್ಥಾನವನ್ನು ಭದ್ರವಾಗಿಸಿತು. ಓಪಿಯಂನ್ನು ದ್ವೇಷಿಸುತ್ತಿದ್ದ ಸಿಗ್ಮಂಡ ಫ್ರಾಯ್ಡ ಸಹ ಕೊಕೇನ್ ಬಳಕೆಯನ್ನು ಒಪ್ಪಿದರು. ಬರುಬರುತ್ತ ಕೊಕೇನ್ ಜನಪ್ರಿಯತೆ ಎಗ್ಗಿಲ್ಲದೇ ಬೆಳೆಯಿತು. ಕೆಲವು ಪಾನೀಯಗಳ ಉತ್ಪಾದಕರು ತಮ್ಮ ಪೇಯಗಳಲ್ಲಿ ಕೊಕೇನ್ ಇವೆ ಎಂದು ಜಾಹೀರುಗೊಳಿಸತೊಡಗಿದರು. ಜನಪ್ರಿಯವಾಗಿದ್ದ ಕೋಕೋ ಕೋಲಾ ಕೊಕೇನ್ ಹೊಂದಿದ್ದ ಒಂದು ಪಾನೀಯ. ಬಹಳ ಸಣ್ಣ ಪ್ರಮಾಣದಲ್ಲಿ ಇದರಲ್ಲಿ ಕೊಕೇನ್ ಬಳಸುತ್ತಿದ್ದರು. ಜನರು ಇದಕ್ಕೆ ಮರುಳಾಗಿದ್ದುದರಲ್ಲಿ ಯಾವ ಅದ್ಭುತವೂ ಇಲ್ಲ.

ಕೊಕೇನ್ ಬಳಕೆ ಸಹ ಅಪಾಯಕಾರಿ. ಈ ಸತ್ಯ ತಿಳಿದೊಡನೆ ಕೊಕೇನ್‌ನನ್ನು ಬಹಿಷ್ಕರಿಸಿದರು.

ಕೊಕೇನ್ ಮಾಯವಾಯಿತು. ಆ ಸ್ಥಳ ತುಂಬಲು ಬಂದ ಇನ್ನೊಂದು ಮಾದಕ ವಸ್ತು ಮರಿಜುವಾನಾ. ೨೦ನೇ ಶತಮಾನದ ಆದಿಯಲ್ಲಿ ಪ್ರತಿಯೊಬ್ಬ ಸಾಮಾನ್ಯ ವ್ಯಕ್ತಿಗೂ ಮಾದಕ ವಸ್ತು ವಿರೋಧ ಪ್ರಜ್ಞೆ ಬಂದಿತ್ತು. ಆದರೆ ಬುದ್ಧಿಜೀವಿಗಳೆನಿಸಿಕೊಂಡ ವ್ಯಕ್ತಿಗಳು ಮಾತ್ರ ಅದರ ಸೆಳುವಿನ ಸುಳಿಯಲ್ಲಿ ಗಿರಕಿ ಹೊಡೆದರು. ಕಲಾಕಾರರು, ಸಂಗೀತಗಾರರು ಮಾದಕ ವಸ್ತುಗಳು ತಮ್ಮ ಜನ್ಮಸಿದ್ಧ ಹಕ್ಕು ಎಂದೇ ಬಗೆದರು.

ವರ್ಷಗಳು ಕಳೆದಿವೆ. ಎಲ್.ಎಸ್.ಡಿ. ಹಾಗೂ ಇತರ ಮಸ್ಕಲೈನ್ ಮಾದಕ ಔಷಧಗಳು ಬೆಳಕಿಗೆ ಬಂದಿವೆ.

## ಅರಬರು ನೀಡಿದ ಉಡುಗೊರೆ

ಮಾದಕ ವಸ್ತುಗಳನ್ನು ಭಾರತಕ್ಕೆ ತಂದವರಾರು ? ಅರಬರು ಇದರ ರುಚಿಯನ್ನು ಭಾರತೀಯರಿಗೆ ಮತ್ತು ಪರ್ಶಿಯನ್ನರಿಗೆ ಹಂಚಿದರು ಎನ್ನಲಾಗಿದೆ. ಮತ್ತಿನ ವಸ್ತುಗಳನ್ನವರು ಯುದ್ಧದ ಸಮಯದಲ್ಲಿ ಬಳಸುವಂತೆ ಪ್ರೇರೇಪಿಸಿದರು. ಸೈನಿಕರಿಗೆ ಸ್ಫೂರ್ತಿಯ ಸೆಲೆಯಾಗಿ, ಧೈರ್ಯ ತುಂಬುವ ವಸ್ತುವಾಗಿ ಇವು ಬಳಸಲ್ಪಟ್ಟವು. ಈ ಅಭ್ಯಾಸ ಮುಂದೆ ಬಲವಾಯಿತು. ಯುದ್ಧಕಾಲದಲ್ಲಿ ಇವುಗಳ ಬಳಕೆ ಅನಿವಾರ್ಯವೆನ್ನಿಸಿತು. ಮಾದಕ ವಸ್ತು ಸೇವಿಸಿದ ಬಳಿಕ

ಯಾವುದೇ ಗಾಯಗಳಾದರೂ ಆ ವ್ಯಕ್ತಿಗೆ ನೋವಾಗುತ್ತಿರಲಿಲ್ಲ. ಆದರೆ ಕೆಲಸ ಕಾರ್ಯಗಳಲ್ಲಿ ಉತ್ಸಾಹವೇನೂ ಕಮ್ಮಿಯಾಗಲಿಲ್ಲ. ಬರುಬರುತ್ತಾ ತಮ್ಮ ವಿಶಾಲ ಬಾಹುಬಂಧನದಲ್ಲಿ ಉಳಿದವರನ್ನು ಬಂಧಿಸದೇ ಬಿಡಲಿಲ್ಲ.

ಮಾದಕ ವಸ್ತುಗಳ ಸೇವನೆ ಭಾರತಕ್ಕೆ ಹೊಸದೇನೂ ಅಲ್ಲ. ಸಾಧುಸಂತರು ಗಾಂಜಾ ಹೊಡೆದು, ಕಳ್ಳು ಕುಡಿದು, ಆತ್ಮ-ಪರಮಾತ್ಮನ ನಡುವಿನ ಸಂಬಂಧಗಳ ಬಗ್ಗೆ ಮಾತಾಡುತ್ತಿದ್ದ ದೇಶ ಇದು. ಇಂದಿಗೂ ಕೂಡ ಮನಸ್ಸಿನ ಏಕಾಗ್ರತೆಗಾಗಿ ಕೆಲವು ಆಧ್ಯಾತ್ಮವಾದಿಗಳು ಗಾಂಜಾದಂಥ ಮತ್ತಿನ ವಸ್ತುಗಳ ಸೇವನೆ ಮಾಡುತ್ತಾರೆ! ಆಧ್ಯಾತ್ಮವಾದಿಗಳ ಸೇವನೆಗೆ ಮಾತ್ರ ಸೀಮಿತವಾಗಿದ್ದ ಮಾದಕ ವಸ್ತುಗಳು, ಶಾಲಾ ಕಾಲೇಜುಗಳಂಥ ಶೈಕ್ಷಣಿಕ ಕೇಂದ್ರಗಳಿಗೆ ಲಗ್ಗೆ ಹಾಕಿ ಇದೇ ಸಮಾಜದ ಆರೋಗ್ಯಕ್ಕೆ ಭಾರೀ ದೊಡ್ಡ ಸವಾಲಾಗಿರುವುದು ತುಂಬಾ ಅಪಾಯಕಾರಿ ಬೆಳವಣಿಗೆ.

ಮಾದಕ ವಸ್ತುಗಳ ಸೇವನೆ ಈಗ ವಿರಾಟರೂಪ ತಾಳಿ ವಿಶ್ವವ್ಯಾಪ್ತಿಯಾಗಿದೆ. ವಿದ್ಯಾರ್ಥಿ ಸಮುದಾಯದಲ್ಲಂತೂ ಮಾದಕ ವಸ್ತುಗಳ ಸೇವನೆ ದಿನದಿಂದ ದಿನಕ್ಕೆ ಅಪಾಯಕಾರಿಯಾದ ರೀತಿಯಲ್ಲಿ ಅಪರಿಮಿತವಾಗಿ ಹೆಚ್ಚುತ್ತಲಿದೆ. ಕಳೆದ ವರ್ಷ ಮುಂಬೈ ಕಾಲೇಜು ವಿದ್ಯಾರ್ಥಿಗಳನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಿದಾಗ ಪ್ರತಿಶತ ೩೫ರಿಂದ ೪೦ರಷ್ಟು ವಿದ್ಯಾರ್ಥಿಗಳು ಪ್ರತಿನಿತ್ಯ ಒಂದಲ್ಲ ಒಂದು

ಮಾದಕ ವಸ್ತುಗಳ ಅಡಿಯಾಳಾಗಿರುವುದು ಬೆಳಕಿಗೆ ಬಂತು. ಭಯ ಹುಟ್ಟಿಸಿತು. ಕೆಲವು ತಿಂಗಳ ಹಿಂದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಡೆಸಿದ ಸಮೀಕ್ಷೆಯೊಂದರ ಪ್ರಕಾರ ಪ್ರತಿಶತ ೨೩ರಷ್ಟು ವಿದ್ಯಾರ್ಥಿಗಳು ಮಾದಕ ವಸ್ತುಗಳನ್ನು ಸೇವಿಸುತ್ತಾರೆಂಬುದು ದೃಢವಾಯಿತು. ಬಹುತೇಕ ವಿದ್ಯಾರ್ಥಿಗಳು ಮಾದಕ ವಸ್ತುಗಳ ಸೇವನೆಯನ್ನು ತಮ್ಮ ದಿನನಿತ್ಯದ ಬದುಕಿನ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿದ್ದಾರೆ. ಕುತೂಹಲಕ್ಕೆ, ಸುಖದ ಅಮಲಿನ ಆಮಿಷಕ್ಕೆ ಒಳಗಾಗಿ ಅಪಾಯದ ಅರಿವು ಆಗುವ ವೇಳೆಗೆ ಆಕ್ಟೋಪಸ್ ಹಿಡಿತಕ್ಕೆ ಸಿಕ್ಕು ಜರ್ಜರಿತರಾಗಿರುತ್ತಾರೆ. ಮೋಜಿಗಾಗಿ ಕಲಿತದ್ದು ಜೀವನದ ಕೊನೆಯ ಮಜಲನ್ನು ಮುಟ್ಟುವವರೆಗೂ ಅಂಟಿಕೊಂಡು ಬಿಡುತ್ತದೆ.

"ಮದ್ಯಪಾನವ ಮಾಡಿ ಇದ್ದುದೆಲ್ಲವ ನೀಡಿ
ಬಿದ್ದುಹೋಗುವವನ ಸದ್ದಡಗಿ। ಸಂತಾನ
ಎದ್ದು ಹೋಗುವುದು ಸರ್ವಜ್ಞ"

ಸರ್ವಜ್ಞ ತನ್ನ ವಚನದ ಮೂಲಕ ಮಾದಕ (ಮದ್ಯಪಾನ) ವಸ್ತುಗಳ ಬಗ್ಗೆ ಎಚ್ಚರಿಕೆ ನೀಡಿ ಶತಮಾನಗಳು ಸಂದಿದ್ದರೂ ಈ ಬಗ್ಗೆ ಜನರು ಎಚ್ಚೆತ್ತು ಕೊಳ್ಳದೇ, ಮಾದಕ ವಸ್ತುಗಳ ಸೇವಿಸುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದು ಅತ್ಯಂತ ಶೋಚನೀಯ.

ವಿದ್ಯಾರ್ಥಿ ಸಮುದಾಯದಲ್ಲಿ ಅಪಾಯಕರ ರೀತಿಯಲ್ಲಿ ಹೆಚ್ಚುತ್ತಿರುವ ಈ ಅಮಲು ಪದಾರ್ಥಗಳ ಸೇವನೆಯ ಸಮಸ್ಯೆ ಕೇವಲ ಸಾಮಾಜಿಕ ಮತ್ತು ಆರೋಗ್ಯದ ಸಮಸ್ಯೆ ಮಾತ್ರವಲ್ಲ, ಒಂದು ದೇಶದ ಯುವ ಜನಾಂಗ ಎದುರಿಸುತ್ತಿರುವ ಭೀಕರ ಸಮಸ್ಯೆ ಕೂಡ. ಆ ದೇಶದ ಯುವಕರ ಮಾನಸಿಕ ಗೊಂದಲದ, ಅಸ್ಥಿರ ಮನಸ್ಥಿತಿಯ ಪ್ರತೀಕ ಕೂಡ.

## ಚಟಾಧೀನರಾಗುವವರು ಯಾರು?

"ಕಲಿತ ಚಟಕ್ಕೆ ಕಲ್ಲು ಹಾಕಿದ್ರೂ ಬಿಡುದಿಲ್ಲ" ಎಂಬುದು ಮತ್ತಿನ ವಸ್ತುಗಳ ವಿಷಯದಲ್ಲಂತೂ ಸತ್ಯ. ಬಹಳ ಮಂದಿ ಆಗೊಮ್ಮೆ ಈಗೊಮ್ಮೆ ಮೋಜಿಗಾಗಿ, ಕುತೂಹಲಕ್ಕಾಗಿ, ಖುಷಿಗಾಗಿ ಮಾದಕ ವಸ್ತುಗಳನ್ನು ಸೇವಿಸುತ್ತಾರೆ. ಕೆಲವರು ಅದರ ದಾಸಾನುದಾಸರಾಗುತ್ತಾರೆ. ಮಾದಕ ವಸ್ತುಗಳ ಮನಮೋಹಕ ಮಾಯಾಜಾಲದಲ್ಲಿ ವ್ಯಾಮೋಹಕ್ಕೆ ಬಲಿಯಾಗಿ ಚಟಾಧೀನರಾಗುವವರು ಯಾರು? ಅವರ ಸಾಮಾನ್ಯ ಲಕ್ಷಣಗಳೇನು? ಅದರಲ್ಲಿ ಏನು ಕೊರತೆ ಇರುತ್ತದೆ. ಅವನ್ನು ಮೊದಲೇ ಗಮನಿಸಿ, ಎಚ್ಚರ ವಹಿಸಿ, ಅವರು ಚಟಕ್ಕೆ ಬೀಳದಂತೆ ಮಾಡಲು ಸಾಧ್ಯವೇ ಎಂಬ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ಚಟಕ್ಕೆ ತುತ್ತಾಗುವವರನ್ನು ಮುಖ್ಯವಾಗಿ ಮೂರು ಗುಂಪಾಗಿ ವಿಂಗಡಿಸಬಹುದು.

೧. ಅಸಹಾಯಕರು ಮತ್ತು ದುಃಖಿತರು

೨. ಮಾನಸಿಕ ಅಸ್ವಸ್ಥರು

೩. ವ್ಯಕ್ತಿತ್ವ ದೋಷವುಳ್ಳವರು

**ಅಸಾಹಕರು ಮತ್ತು ದುಃಖಿತರು:** ಕೌಟುಂಬಿಕ ಕಾರಣಗಳು, ವ್ಯಕ್ತಿಗಳ ನಡುವಿನ ಮನಸ್ತಾಪಗಳು, ಹಲವು ಬಗೆಯ ನೋವು, ನಿರಾಶೆಗಳು, ಹಣಕಾಸಿನ ಮುಗ್ಗಟ್ಟು, ಉದ್ಯೋಗದಲ್ಲಿನ ಸಮಸ್ಯೆಗಳು, ಅತೃಪ್ತಿ, ಲೈಂಗಿಕ ಸಮಸ್ಯೆಗಳು ಇತ್ಯಾದಿ ನಾನಾ ಬಗೆಯ ಕಾರಣಗಳಿಂದ ದುಃಖಿತರಾಗುವ, ಅಸಹಾಯಕಾರಗುವ ಜನ ಮಾದಕ ವಸ್ತುಗಳ ಮರುಳು ಮಾಡುವ ಮೋಡಿಗೆ, ಮಾಯಾಜಾಲಕ್ಕೆ ಸುಲಭವಾಗಿ ಸೋತು ತಮ್ಮನ್ನು ತಾವೇ ಅವುಗಳಿಗೆ ಅರ್ಪಿಸಿಕೊಳ್ಳುತ್ತಾರೆ. ಈ ಮಾದಕ ವಸ್ತುಗಳು ಉಂಟುಮಾಡುವ ಸುಖದ ಭ್ರಮೆಯಲ್ಲಿ ತಮ್ಮ ನೋವು ದುಃಖವನ್ನು ಮರೆಯುವ ವಿಫಲ ಪ್ರಯತ್ನ ಮಾಡುತ್ತಾರೆ. ದುಃಖವಾದಾಗಲೆಲ್ಲಾ ಮತ್ತು ದುಃಖವಾಗಬಹುದು ಎಂಬ ನಿರೀಕ್ಷೆ ಇರುವ ಸಂದರ್ಭಗಳಲ್ಲೆಲ್ಲಾ ಮಾದಕ ವಸ್ತುಗಳ ಸೇವನೆ ಮಾಡುತ್ತಾರೆ. ಚಟವನ್ನು ಬೆಳೆಸಿಕೊಳ್ಳುತ್ತಾರೆ. ದಾಸಾನು ದಾಸರಾಗುತ್ತಾರೆ. ಅವು ನಿರ್ಮಿಸುವ ವ್ಯಾಸದಲ್ಲೆ ಗಿರಕಿ ಹೊಡೆಯುತ್ತಾರೆ.

**ಮಾನಸಿಕ ಅಸ್ವಸ್ಥರು:** ವಿವಿಧ ಮಾನಸಿಕ ಕಾಯಿಲೆಗಳಾದ ಮೇನಿಯಾ, ಒಳಜನ್ಯ ಖಿನ್ನತೆ, ಸಿಜೋಫ್ರೀನಿಯಾ, ಅಂಗದೋಷದ ಚಿತ್ತ ವಿಕಲತೆ, ಮತಿಹೀನ ಸ್ಥಿತಿಯಲ್ಲಿ ರೋಗಿ

ತನ್ನ ವಿವೇಚನೆ ಕಳೆದುಕೊಂಡು, ಕಾಯಿಲೆಯು ಉಂಟು ಮಾಡುವ ಭಯಾನಕ ಭ್ರಮೆಗಳಿಂದ ದೂರವಾಗಲು ಮತ್ತಿನ ವಸ್ತುಗಳ ಮೊರೆ ಹೋಗಬಹುದು. ತನ್ನ ನಡವಳಿಕೆ, ನಿರ್ಧಾರ ಕೈಕೊಳ್ಳುವ ಶಕ್ತಿಯ ಮೇಲೆ ಹತೋಟಿ ಕಳೆದುಕೊಂಡು, ಅನಿಯಂತ್ರಿತವಾಗಿ ಸೇವಿಸತೊಡಗುತ್ತಾರೆ.

**ವ್ಯಕ್ತಿತ್ವ ದೋಷವುಳ್ಳವರು:** ಜೈವಿಕ ಕಾರಣಗಳಿಂದ ಅಥವಾ ಬೆಳೆದ ವಾತಾವರಣದಲ್ಲಿನ ಕೆಟ್ಟ ಮಾದರಿ-ನ್ಯೂನತೆಗಳಿಂದ ಅಥವಾ ತಂದೆತಾಯಿಗಳ, ಪೋಷಕರ, ಹಿರಿಯರ ಅನಾರೋಗ್ಯಕರ ದ್ವಂದ್ವ ಧೋರಣೆಯ ಮತ್ತು ತಪ್ಪು ಪ್ರೋತ್ಸಾಹ, ಮಾರ್ಗದರ್ಶನಗಳಿಂದ ವ್ಯಕ್ತಿಯ ವ್ಯಕ್ತಿತ್ವ ಪರಿಪೂರ್ಣವಾಗಿ, ಆರೋಗ್ಯಕರವಾಗಿ ವಿಕಾಸವಾಗುವುದಿಲ್ಲ. ಅವನ ವ್ಯಕ್ತಿತ್ವ ದೋಷಪೂರ್ಣವಾಗಿ ದುರ್ಬಲವಾಗುತ್ತದೆ. ಆತ ವಿಪರೀತ ಸ್ವಾರ್ಥಿ, ಸುಖಲೋಲನಾಗಬಹುದು. ಮೈಮನಸ್ಸುಗಳ ಕಾಮನೆಗಳನ್ನು ಹತೋಟಿಯಲ್ಲಿಡಲು ವಿಫಲನಾಗಬಹುದು. ಹಿಂದಿನ ಅನುಭವಗಳಿಂದ, ಪಡೆದ ಶಿಕ್ಷೆಯಿಂದ ಪಾಠ ಕಲಿಯುವುದಿಲ್ಲ. ಸಾಮಾಜಿಕ, ನೈತಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ಆತ ಕಲಿಯುವುದಿಲ್ಲ. ಅವುಗಳಿಗೆ ಗೌರವವನ್ನೂ ಕೊಡುವುದಿಲ್ಲ. ತನಗೆ, ತನ್ನವರಿಗೆ ಏನು, ಯಾವುದು ಅಭ್ಯುದಯಕಾರಿ ಕ್ಷೇಮಕಾರಿ ಎಂಬ ವಿವೇಚನೆಯನ್ನು ಬೆಳೆಸಿಕೊಳ್ಳುವುದಿಲ್ಲ. ತತ್‌ಕ್ಷಣದ, ತಾತ್ಕಾಲಿಕ ಲಾಭಸುಖಕ್ಕಾಗಿ ಹಾತೊರೆಯುತ್ತಾನೆ. ಇಂತಹ ವ್ಯಕ್ತಿ ಮಾದಕ ವಸ್ತುವನ್ನು ಸೇವಿಸಲಾರಂಭಿಸಿದರೆ, ಸೀಮೆಎಣ್ಣೆ, ಬೆಂಕಿ ಜೊತೆ

ಸೇರಿದಂತಾಗುತ್ತದೆ. ಇಬ್ಬರೂ ಜೊತೆಯಾಗೇ ಉರಿದು ಬೂದಿಯಾಗುತ್ತಾರೆ.

ಮತ್ತಿನ ವಸ್ತುಗಳು ಎಷ್ಟು ಸುಲಭವಾಗಿ, ವ್ಯಾಪಕವಾಗಿ ದೊರೆಯುತ್ತವೆ. ಜೊತೆಗಾರರು ಮತ್ತು ಪರಿಸರ ಇವುಗಳ ಸೇವನೆಗೆ ಎಷ್ಟು ಒತ್ತಾಸೆ ನೀಡುತ್ತಾರೆ ಎನ್ನುವುದೂ ಚಟ ಬೆಳೆಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಸಾಮಾಜಿಕ ಅವ್ಯವಸ್ಥೆ, ಅನೀತಿ, ಅಸಮತೆ, ನಿರುದ್ಯೋಗಗಳೂ ಇದಕ್ಕೆ ಪುಟ ಕೊಡುತ್ತವೆ. ಆನುವಂಶೀಯವಾಗಿ ಬರುವ 'ದುರ್ಬಲತೆ' ಕೂಡ. ಚಟ ಬೆಳೆಯುವುದಕ್ಕೆ ಕಾರಣ ಎಂದು ನಂಬಲಾಗಿದೆ. ಏಕೆಂದರೆ, ಮಾದಕ ವಸ್ತುವಿನ ವ್ಯಸನಿಯ ಮಕ್ಕಳನ್ನು ಆತನಿಂದ ಬೇರ್ಪಡಿಸಿ, ಆರೋಗ್ಯಕರ ವಾತಾವರಣದಲ್ಲಿ ಬೆಳೆಸಿದರೂ, ಅವರು ವ್ಯಸನಿಗಳಾಗುವ ಸಂಭವವೇ ಜಾಸ್ತಿ.

## ಮಾದಕ ವಸ್ತುಗಳು

ಸರ್ವಸಾಮಾನ್ಯವಾಗಿ ಎಲ್ಲೆಡೆ ಉಪಯೋಗದಲ್ಲಿರುವ ಮಾದಕವಸ್ತುಗಳೆಂದರೆ:

೧. ಕೇವಲ ಮಾನಸಿಕ ದಾಸ್ಯತ್ವವನ್ನುಂಟು ಮಾಡುವ ಔಷಧಿಗಳು. ಕೊಕೇನ್, ಎಲ್.ಎಸ್.ಡಿ, ಸೈಲೋಸೈಬಿನ್, ಮಸ್ಕಾಲಿನ್, ಕೆನಾಬಿಸ್, ನಿಕೋಟಿನ್, ಕೆಫೀನ್

೨. ಸಂಪೂರ್ಣ ಮಾನಸಿಕ ಹಾಗೂ ಸಂದೇಹಾಸ್ಪದ ದೈಹಿಕ ದಾಸ್ಯತ್ವವನ್ನುಂಟು ಮಾಡುವ ಔಷಧಿಗಳು.

ಅ. ಅಪೀಮು ಪ್ರತಿರೋಧಕಗಳು (Opiate antagonists) – ನಲಾರ್‌ಫಿನ್, ಲೆವಾಲಾರಫೆನ್, ಸೈಕ್ಲಜೋಸಿನ್.

ಬ. ಆಂಫಿಟಮಿನ್‌ಗಳು: ಆಂಫಿಟಮಿನ್, ಮೆಥಾಂಫಿಟಮಿನ್. ಫೆನ್ ಮೆಟ್ರಾಜೈನ್, ಮೀಥೈಲ್ ಫ್ಲೆನಿಡೇಟ್, ಪಿಪ್ರಡಾಲ್

೩. ಸಂಪೂರ್ಣ ಮಾನಸಿಕ ಹಾಗೂ ದೈಹಿಕ ದಾಸ್ಯತ್ವವನ್ನುಂಟು ಮಾಡುವ ಔಷಧಗಳು.

ಅ. ಅಪೀಮು ತರಹದವು: ಮಾರ್ಫಿನ್, ಕೋಡೀನ್, ಡೈಹೈಡ್ರೋ ಮಾರ್ಫಿನಾನ್, ಹೆರಾಯಿನ್ ಪೆಥಡಿನ್, ಮೆಥಾಡೋನ್, ಫೆನಾಜೋಸಿನ್, ಲೋಮೋಟಿಲ್

ಬ. ಮದ್ಯಸಾರ-ಬಾರ್ಬಿಚುರೇಟ್ ತರಹದವು: ಈಥೈಲ್ ಆಲ್ಕೋಹಾಲ್, ಬಾರ್ಬಿಚುರೇಟ್, ಪೆರಾಲ್ಡಿಹೈಡ್,

ಕ್ಲೋರಾಲ್ ಹೈಡ್ರೇಟ್, ಮೆಪ್ರೋಬಮೇಟ್, ಗ್ಲುಟಥೆಮಿಡ್. ಮೀಥೈಲ್ ಪ್ರೈಲಾನ್, ಎಥೀನ್‌ಮೈಟ್, ಎಥಾಕ್ಲೋರ್ ವೈನಾಲ್, ಬೆಂಜೋಡಯಾಜಿಪೈನ್ಸ್, ಮೆಥಾಕ್ವಾಲೋನ್.

ಇಂದು ಸಾಮಾನ್ಯವಾಗಿ ದುರುಪಯೋಗವಾಗುತ್ತಿರುವ ಔಷಧಿಗಳಲ್ಲಿ ಮುಖ್ಯವಾದವು ಆರು.

**೧. ಆಂಫಿಟಮಿನ್:**

ಇದು ಬೊಜ್ಜು ಮತ್ತು ಖಿನ್ನತೆಯ ನಿವಾರಕ. ಅತಿ ನಿದ್ರಾರೋಗ ಹಾಗೂ ಹಲವು ಮಕ್ಕಳ ಮಾನಸಿಕ ರೋಗಗಳಲ್ಲಿ ಬಳಸಲ್ಪಡುವ ಔಷಧ. ಇದು ಕೇಂದ್ರನರಮಂಡಲದ ಉತ್ತೇಜಕಾರಕ (Stimulant). ಇದರ ಸೇವನೆ ಇಲ್ಲದ ಹುಮ್ಮಸ್ಸು, ಚೈತನ್ಯವನ್ನು ತಂದುಕೊಡುವ ಕಾರಣ ಇದಕ್ಕೆ 'ಸುಪರ್‌ಮನ್ ಔಷಧಿ' (Superman Drug) ಎಂಬ ಬಿರುದು! ಬೆಜಿಡ್ರಿನ್, ಡೆಕ್ಸಿಡ್ರಿನ್, ಮೆಥಿಡ್ರಿನ್ – ಇವು ಈ ಔಷಧದ ವ್ಯಾಪಾರೀ ಹೆಸರುಗಳು.

**೨. ಕೋಕೇನ್:**

ಸ್ಥಳೀಯ ಅರಿವಳಿಕೆಯಾಗಿ (Local Anasthetic) ಉಪಯೋಗಿಸಲ್ಪಡುವ ಈ ಔಷಧದ ಮೂಲ ಕೋಕೋ ಎಲೆಗಳು. ದಕ್ಷಿಣ ಅಮೇರಿಕದ ಪೆರು, ಬೊಲೀವಿಯ ದೇಶಗಳ ಜನರಲ್ಲಿ ಎಲೆ ಅಡಿಕೆಯಂತೆ, ಕೋಕೋ ಎಲೆಗಳನ್ನು

ಜಗಿಯುವುದು ಪ್ರಾಚೀನಕಾಲದಿಂದಲೂ ನಡೆದು ಬಂದಿರುವ ಸಂಪ್ರದಾಯ. ಇದೂ ಕೇಂದ್ರ ನರಮಂಡಲದ ಉತ್ತೇಜಕಾರಕ. ಮನಸ್ಸನ್ನು ವಿರೂಪಗೊಳಿಸಿ, ಭ್ರಮೆಯನ್ನುಂಟು ಮಾಡುವುದು ಇದರ ವಿಶೇಷಗುಣ. ದುರ್ವ್ಯಸನಿಗಳಲ್ಲಿ ಇದಕ್ಕೆ ನಾನಾ ಹೆಸರುಗಳು. ಉದಾ: ಕ್ಯಾಂಡಿ, ಡೋಪ್, ಡಸ್ಟ್, ಕೋಕ್, ಹಾರ್ಡ್, ಸ್ಟಫ್, ಜಂಕ್, ಸ್ನೋ . . . . ಇತ್ಯಾದಿ.

**೩. ಬಾರ್ಬಿಚುರೇಟ್:**

ನಿದ್ರೆಮಾತ್ರೆಗಳಲ್ಲಿರುವ ಪ್ರಮುಖ ಔಷಧ. ಪೆಂಟೋಬಾರ್ಬಿಟಾಲ್, ಸೆಕೋಬಾರ್ಬಿಟಾಲ್‌ಗಳು ವ್ಯಸನಿಗಳಿಗೆ ಅಚ್ಚುಮೆಚ್ಚು. ಇದು ಕೇಂದ್ರನರಮಂಡಲದ ಮಾಂದ್ಯಜನಕ (Depresant) ಮಾನಸಿಕ ಮತ್ತು ದೈಹಿಕ ದಾಸ್ಯತ್ವವನ್ನುಂಟುಮಾಡುವ ವಿಶೇಷ ಗುಣ ಇದಕ್ಕಿದೆ.

**೪. ಕೆನಾಬಿಸ್:**

ವಿಶ್ವದಾದ್ಯಂತ ಪ್ರಾಚೀನ ಕಾಲದಿಂದಲೂ ವ್ಯಸನಿಗಳಿಗೆ ಇದು ಕಲ್ಪವೃಕ್ಷ!

ಭಾರತದಲ್ಲಿ ಇದು ಸಹಜವಾಗಿ ಬೆಳೆಯುವ ಸ್ಥಳ ಕುಲು, ಮನಾಲಿ, ಕಾಶ್ಮೀರದ ಬೆಟ್ಟಗುಡ್ಡಗಳು. ಚರಸ್, ಗಾಂಜಾ, ಅಫೀಮು ಇತ್ಯಾದಿಗಳು ಇದರಿಂದ ತಯಾರಾಗುತ್ತದೆ.

ಹೆಣ್ಣು ಸಸ್ಯದ ಹೂ ಮತ್ತು ಜಿಗುರನ್ನು ಒಣಗಿಸಿ ಪುಡಿ ಮಾಡಿ ಸೋಸಿದ ಧೂಳಿಗೆ. ಎಳ್ಳೆಣ್ಣೆ ಬೆರೆಸಿ ಅರ್ಧ ಗಂಟೆಯವರೆಗೂ ಚಪಾತಿ ಹಿಟ್ಟಿನಂತೆ ನಾದಿದಾಗ ಪ್ರಥಮ ದರ್ಜೆಯ ಚರಸ್ ಸಿದ್ಧ! ಉಳಿದ ಪುಡಿಯನ್ನು ಎರಡನೆಯ ಬಾರಿ ಸೋಸಿ, ಎಳ್ಳೆಣ್ಣೆಯಲ್ಲಿ ನಾದಿದಾಗ ಎರಡನೆಯ ದರ್ಜೆ ಚರಸ್ ತಯಾರು. ಹೀಗೆಯೇ ಮೂರನೆಯ ದರ್ಜೆ ಚರಸ್ ತಯಾರಿಸಿ ಉಳಿದ ಪುಡಿಗೆ ಕೆನಾಬಿಸ್ ಸಸ್ಯದ ಎಲೆ, ಕಾಂಡ ಮತ್ತು ತಂಬಾಕನ್ನು ಬೆರೆಸಿದಾಗ ಅದಕ್ಕೆ 'ಗಾಂಜಾ' ಎಂಬ ಹೆಸರು. ಸಿಗರೇಟ, ಚಿಲುಮೆ ಹುಕ್ಕಾಗಳ ಮೂಲಕ ಇದರ ಸೇವನೆ. ಉತ್ತರ ಭಾರತದ ಕೆಲವು ಹಳ್ಳಿಗಳಲ್ಲಿ "ಭಂಗೀ" ಬೆರೆತ ರಾಮರಸ. ಸಿಹಿತಿಂಡಿಗಳು ಸರ್ವವ್ಯಾಪಿಯಾಗಿ ಲಭ್ಯ, ಸಾಧುಸಂತರು ಇದನ್ನು ಉಪಯೋಗಿಸುವದರಿಂದ ಇದಕ್ಕಿದೆ ವಿಶೇಷ ಧಾರ್ಮಿಕ ಚೌಕಟ್ಟು !

ಚರಸ್‌ನ ಪ್ರಬಲ ರೂಪ ಚರಸ್ ತೈಲ! ಒಂದು ಕೆ.ಜಿ ಚರಸ್‌ನ್ನು ಭಟ್ಟಿಯಿಳಿಸಿದರೆ ೧೦೦ ಗ್ರಾಂ. ಎಣ್ಣೆ ಲಭ್ಯ. ಇದರ ಬೆಲೆ ಬಹಳ ದುಬಾರಿ. ಇದರೊಡನೆ ಅಫೀಮನ್ನು ಬೆರೆಸಿದರೆ, ಪ್ರಭಾವ ಅತ್ಯಂತ ಉಗ್ರ.

ಚರಸ್, ಗಾಂಜಾ ಸೇವಿಸಿದಾಗ ಮಾನಸಿಕ, ದೈಹಿಕ ನೋವುಗಳೆಲ್ಲಾ ಮಂಗಮಾಯ. ಸತತವಾಗಿ ನಗು ಬರಿಸುತ್ತದೆ. ಬಣ್ಣಬಣ್ಣಗಳಿಂದ ಕೂಡಿದ, ಮಧುರ ಸಂಗೀತಮಯ, ಕಾಲ ದೇಶಗಳನ್ನು ಮೀರಿದ ಸುವರ್ಣಲೋಕದಲ್ಲಿ ಸಂಚಾರ

ಮಾಡಿಸುತ್ತದೆ. ಕೆನಾಬಿಸ್‌ಗೆ ಬಳಕೆಯಲ್ಲಿರುವ ಅಡ್ಡ ಹೆಸರುಗಳು ಏಂಜಲ್ ಡಸ್ಟ್, ಡೋಪ್, ಹಶೀಶ್, ಮೇರಿಜೇನ್, ಮೆಕ್ಸಿಕನ್ ಬ್ರೌನ್, ಪಾಟ್, ಶಿಟ್, ವೀಡ್, ಹಂಪ್ . . . ಇತ್ಯಾದಿ.

ಗಾಂಜಾಗಿಡದ ಎರಡು ಪ್ರಭೇದಗಳ ಹೆಸರು– Cannabis Indica, Cannabis Sativa.

**೫. ಅಫೀಮು:**

ಗಸಗಸೆ ಗಿಡದ (Papaver Somniferum) ಕಾಯಿಗಳನ್ನು ಕೆರೆದಾಗ ಬಿಳೀ ಹಾಲು ಸುರಿಯುತ್ತದೆ. ಇದನ್ನು ಒಣಗಿಸಿದಾಗ ಗೋಂದಿನಂತಹ ಕಂದು ವಸ್ತು ರೂಪಗೊಳ್ಳುತ್ತದೆ. ಇದೇ ಅಫೀಮು. ಇದರಲ್ಲಿ ಮಾರ್ಫಿನ್, ಕೋಡಿನ್, ಥೆಬಾಯಿನ್, ಪಪಾವರಿನ್, ನಾಸ್‌ಕ್ಯಾಪಿನ್. ನಾರ್ಫಿನ್ ಎಂಬ ರಾಸಾಯನಿಕ ವಸ್ತುಗಳಿರುತ್ತವೆ. ಇವುಗಳಲ್ಲಿ ಮಾರ್ಫಿನ್ ಮುಖ್ಯವಾದದ್ದು.

ಇದು ನೋವು ನಿವಾರಕ, ನಿದ್ರಾಕಾರಕ, ಹಾಗೆಯೇ ಕನಸಿನ ಲೋಕದ ಮಾರ್ಗದರ್ಶಕ ! ನೋವು, ಭಯ, ಆತಂಕಗಳ ಪರಿಹರಿಸಿ "ಬ್ರಹ್ಮಾನಂದ" ನೀಡುತ್ತದೆ. ಕೆಳಹೊಟ್ಟೆ ಮತ್ತು ದೇಹದ ಇತರ ಭಾಗಗಳಲ್ಲಿ ಒಂದು ರೀತಿಯ ಬೆಚ್ಚಗಿನ ಅನುಭವವನ್ನು ನೀಡುತ್ತದೆ. ಇದು ಲೈಂಗಿಕ ಚರಮಸ್ಥಿತಿ (Sexual Orgasm) ಯಂತಿರುವುದಂತೆ! ಹಾಗಾಗಿ ಇದು

ಅತ್ಯಂತ ಕೆಟ್ಟ ದಾಸ್ಯತ್ವವನ್ನುಂಟು ಮಾಡುತ್ತದೆ. ಪ್ರತಿಸಲ ಈ ಅನುಭವ ಪಡೆಯಲು ಹೆಚ್ಚು ಹೆಚ್ಚು ಔಷಧ ಅಗತ್ಯ.

ಮಾರ್ಫಿನ್‌ನಿಂದ ಹೆರಾಯಿನ್, ಆಕ್ಸಿಮಾರ್ಫಿನ್, ಅಪೋಮಾರ್ಫಿನ್ ತಯಾರಿಸಬಹುದು. ಹಾಗೆಯೇ ಕೃತಕವಾಗಿ ಪೆಥಡಿನ್, ಮೆಥಡೋನ್, ಲೆವಲಾರ್ಫಿನಾಲ್, ಸೈಕ್ಲಟ್ರೋಸಿನ್ ಮುಂತಾದವನ್ನು ತಯಾರಿಸಬಹುದು. ಒಂದು ಮಿ.ಗ್ರಾಂ. ಮೆಥಡೋನ್, ಎರಡು ಮಿ.ಗ್ರಾಂ. ಹೆರಾಯಿನ್‌ಗೆ/ ನಾಲ್ಕು ಮಿ.ಗ್ರಾಂ. ಮಾರ್ಫಿನ್‌ಗೆ/ ೨೦ ಮಿ.ಗ್ರಾಂ. ಪೆಥಡಿನ್‌ಗೆ ಸಮ!

೬. ಎಲ್.ಎಸ್.ಡಿ:

ಲೈಸರ್‌ಜಿಕ್ ಆಸಿಡ್ ಡೈ ಈಥೈಲ್ ಅಮಿಡ್ ಎಂಬ ರಾಸಾಯನಿಕ ವಸ್ತು ೧೯೩೮ರಲ್ಲಿ ಸ್ವಿಟ್ಜರ್‌ಲ್ಯಾಂಡಿನ ಹಾಫ್‌ಮನ್‌ನಿಂದ ಅವಿಷ್ಕಾರವಾದರೂ ಇದರ ದಾಸ್ಯತ್ವಗುಣ ತಿಳಿದದ್ದು ೧೯೪೩ರಲ್ಲಿ ! ಅದೂ ಸ್ವಯಂ ಹಾಫ್‌ಮನ್ ಅಕಸ್ಮಾತ್ ಹಲವು ಮೈಕ್ರೋ ಗ್ರಾಂ ಎಲ್.ಎಸ್.ಡಿ.ಯನ್ನು ಸೇವಿಸಿದಾಗ !!

ಇಂಗ್ಲೆಂಡ್, ಅಮೇರಿಕದಲ್ಲಿ ಇದು ಘನ ಮತ್ತು ದ್ರವರೂಪಗಳೆರಡರಲ್ಲೂ ದೊರೆಯುತ್ತದೆ. ದ್ರವಕ್ಕೆ ಬಣ್ಣ ವಾಸನೆಗಳಿರದು. ಒಬ್ಬ ವ್ಯಕ್ತಿಗೆ ನರಕದರ್ಶನ ಮಾಡಿಸಲು ಒಂದು ತೊಟ್ಟು ಸಾಕು.

ಇದನ್ನು ಸೇವಿಸಿದಾಗ ವ್ಯಕ್ತಿ ಗಂಟೆಗಟ್ಟಲೆ ಅಳಬಲ್ಲ ಅಥವಾ ನಗಬಲ್ಲ ! ಯಾರೂ ಸಂಗೀತ ನುಡಿಸದಿದ್ದರೂ ಕೇಳಿಸುತ್ತದೆ. ಅಷ್ಟೇ ಅಲ್ಲ ಸಂಗೀತದ ಅಲೆಗಳಿಗೆ ಬಣ್ಣವಿರುತ್ತದೆ. ಮಿಗಿಲಾಗಿ ಹಲವರಿಗೆ ಸಂಗೀತ ಪ್ರತ್ಯಕ್ಷವಾಗಬಹುದು. ಅದರ ಜೊತೆಗೆ ನಾಟ್ಯವಾಡಬಹುದು. ಮತ್ತೆ ಕೆಲವರಿಗೆ ಬಣ್ಣಗಳು ಕೇಳಿಸಬಹುದು (ಕಾಣಿಸುವುದಿಲ್ಲ). ಅನ್ನ ಕಂಡರೆ ವಾಕರಿಕೆ ಬರಬಹುದು ಅಥವಾ ಬಕಾಸುರರಂತೆ ತಿನ್ನಬಹುದು. ಇವರಿಗೆ ಸೆಕೆಂಡುಗಳು ನಿಮಿಷಗಳಾಗಿ ನಿಮಿಷಗಳು ಗಂಟೆಗಳಾಗುತ್ತವೆ. ಈ ಸ್ಥಿತಿಯಲ್ಲಿ ದಾನಶೂರ ಕರ್ಣರಾಗುವುದರಿಂದ ಮೈಮೇಲಿನ ಬಟ್ಟೆಯನ್ನು ದಾನ ಮಾಡಲು ಹಿಂತೆಗೆಯರು. ಇವರ ಲೋಕದಲ್ಲಿ ಸಮುದ್ರ ಕಣ್ಮುಂದೆ ಬತ್ತಿಹೋಗುತ್ತದೆ. ಉರಿಯುವ ಮೇಣದಬತ್ತಿಗಳು ಹೂಗಳಾಗುತ್ತವೆ. ಇವರನ್ನು ಭಯಂಕರ ಪ್ರಾಣಿಗಳು ಅಟ್ಟಿಸಿಕೊಂಡು ಬರುವಂತೆ ಭ್ರಮೆಯಾಗುವ ಕಾರಣ ಅವುಗಳಿಂದ ತಪ್ಪಿಸಿಕೊಳ್ಳಲು ಆತ್ಮಹತ್ಯೆ ಮಾಡಿಕೊಳ್ಳಬಹುದು ಅಥವಾ ಕೊಲೆಯನ್ನೇ ಮಾಡಬಹುದು!

ಇದರ ಸತತ ಉಪಯೋಗದ ಫಲ ನಪುಂಸಕತ್ವ. ಇವರಿಗೆ ಅಂಗಹೀನ ಅಥವಾ ವಿರೂಪಗೊಂಡು ಹುಟ್ಟುವ ಮಕ್ಕಳ ಸಾಧ್ಯತೆ ಹೆಚ್ಚು! ಎಲ್.ಎಸ್.ಡಿ.ಗಿರುವ ನಾನಾ ಹೆಸರುಗಳಲ್ಲಿ ಆಸಿಡ್, ಪರ್ಪಲ್ ಹೇಜ್, ಸನ್‌ಶೈನ್, ಪಿರಮಿಡ್, ಮೈಕ್ರೋಡಾಟ್ ಕ್ಯೂಟ್, ಬಿಗ್-ಡಿ, ಬಿಗ್ ಚೀಫ್, ಹೆವೆನ್ಲಿ ಸನ್‌ಶೈನ್, ಆರೆಂಜ ವೆಡ್ಜ್, ವಿಂಡೋಪ್ಯಾನ್ ಮುಂತಾದವು ಮುಖ್ಯವಾದವು.

## ಕಾರ್ಯನಿರ್ವಹಣೆ

ಇಂಜೆಕ್ಶನ್ ಮೂಲಕವಾಗಲಿ, ಗುಳಿಗೆಗಳನ್ನು ನುಂಗುವುದರಿಂದಾಗಲಿ, ಪಾನೀಯ ಸೇವಿಸುವುದರಿಂದಾಗಲಿ ದೇಹ ಸೇರುವ ಮಾದಕ ವಸ್ತುಗಳು ಅಂತಿಮ ಹಂತದಲ್ಲಿ ರಕ್ತದಲ್ಲಿ ಸಂಚರಿಸಿ, ಕಾರ್ಯನಿರ್ವಹಣೆಯ ಕ್ಷೇತ್ರದ ಕೇಂದ್ರಗಳಿಗೆ ಲಗ್ಗೆ ಹಾಕುವವು.

ನಿದ್ರಾಜನಕಗಳು ನಡುಮಿದುಳಿನಲ್ಲಿರುವ ನಿದ್ರಾಕೇಂದ್ರದ ಮೇಲೆ ನೇರವಾಗಿ ಪ್ರಭಾವ ಬೀರುತ್ತವೆ. ಮಿದುಳಿನ ಹೊರಾವರಣದಲ್ಲಿಯ ಜೀವಕೋಶಗಳನ್ನು ನಿರುತ್ಸಾಹ ಗೊಳಿಸುತ್ತವೆ. ಇವೆರಡರ ಪೂರಕ, ಪೋಷಕ, ಪರಿಪೂರಕ ಪ್ರೇರಣೆಯಿಂದ ಸೇವಿಸಿದ ವ್ಯಕ್ತಿ ನಿದ್ರಾದೇವಿಯ ಮಡಿಲಲ್ಲಿ ಮಲಗುತ್ತಾನೆ. ಇವು ಮಿದುಳಿನ ಜೀವಕೋಶಗಳಲ್ಲಿಯ ಗ್ಲೂಕೋಜ ಉತ್ಕರ್ಷಣೆಗೆ ಅಡ್ಡಿ ಆತಂಕಗಳನ್ನೊಡ್ಡಿ ಪೈರುವೇಟುಗಳ ದೊಡ್ಡಿಗಳನ್ನಾಗಿ ಮಾಡುತ್ತದೆ. ಈ ಪರಿಣಾಮ ನರಕೋಶಗಳಿಗೆ ಮಾತ್ರ ಸೀಮಿತವಾಗಿರದೇ, ದೇಹದ ಉಳಿದ ಕೋಶಗಳಲ್ಲೂ ಕಂಡುಬರುತ್ತವೆ. ಆದರೆ ಉಳಿದ ಕೋಶಗಳಿಗೆ ಆಮ್ಲಜನಕ ಪೂರೈಸಿಕೊಳ್ಳಲು ಲಭ್ಯವಿದ್ದ ಸೌಲಭ್ಯಗಳಿಂದ ನರಕೋಶಗಳು ವಂಚಿತವಾಗಿರುವುದರ ಪ್ರಯುಕ್ತ, ಪರಿಸ್ಥಿತಿಗೆ ಚುರುಕಿನ ಪ್ರತಿಕ್ರಿಯೆಯನ್ನು ನರಮಂಡಲ ತೋರಿಸುತ್ತದೆ. ಉಸಿರಾಟ ಕೇಂದ್ರ, ರಕ್ತ ಪರಿಚಲನಾ ಕೇಂದ್ರಗಳ ಚಟುವಟಿಕೆಗಳು ಆಯ್ಕೆ ಆಧಾರಿತವಾಗಿ ಕುಗ್ಗುತ್ತವೆ.

ನೆಮ್ಮದಿಕಾರಕಗಳು (Tranquilizers) ನರಮಂಡಲದ ಮೇಲೆ ಪ್ರಭಾವ ಬೀರುವ ನಿಶ್ಚಿತ ಕೇಂದ್ರ ನಿಖರವಾಗಿ ತಿಳಿದು ಬಂದಿಲ್ಲ. ಭ್ರಾಂತಿಜನಕವಾದ ಲೈಸರ್ಜಿಕ್ ಆಸಿಡ್ ಡೈ ಇಥೈಲ್ ಅಮೈಡ್‌ಗೆ ಅಡ್ಡಿಯನ್ನೊಡ್ಡಿ ಅಳಿಯದೇ ಉಳಿಯುವಂತೆ ಮಾಡುವ ಮೂಲಕ ಭ್ರಮಾಲೋಕದ ಬ್ರಹ್ಮಾಂಡದಲ್ಲಿ ವಿಹರಿಸುವಂತೆ ಮಾಡುತ್ತವೆ. ಬುದ್ಧಿಮತ್ತೆಯ ಕಾರ್ಯಕಲಾಪಗಳ ಕೇಂದ್ರಗಳಿಗೆ ಕೀಲಿಹಾಕಿ, ಭಾವಾವೇಶದ ಬಾನಿನಲ್ಲಿ ಗೊತ್ತುಗುರಿಯಿಲ್ಲದೇ ಗರಿಬಿಚ್ಚಿ ಹಾರಾಡುವ ವಾತಾವರಣ ನಿರ್ಮಿಸುವುದರಿಂದಾಗಿ ಇದಕ್ಕೆ "ವೈದ್ಯಕೀಯ ನಿರ್ವಾಣ" ಎನ್ನುವರು. ನಿದ್ರಾಜನಕಗಳ ಪರಿಣಾಮಗಳು ಪ್ರಭಾವಶಾಲಿ ಯಾಗುವಲ್ಲಿ ನೆಮ್ಮದಿಕಾರಕಗಳು ಸಹಾಯಕವಾಗುತ್ತವೆ.

ಮಂಪರಿಕಗಳು (Narcotics) ಬೇಸಲ್ ಗ್ಯಾಂಗ್ಲಿಯಾ ದಿಂದ ಹೊರಟು ಮಿದುಳಿನ ಹೊರವಲಯದತ್ತ ಹರಡುವ ನರಗಳ ಹಾದಿಯಲ್ಲಿ ಅಡ್ಡಿಯನ್ನೊಡ್ಡುವುದರಿಂದ ಸರ್ವೋಚ್ಚ ಕೇಂದ್ರಗಳಿಗೆ ನೋವಿನ ಅರಿವು ಆಗುವುದಿಲ್ಲ. ನೋವು ನಿವಾರಕವಾಗಿ ಕಾರ್ಯ ನಿರ್ವಹಿಸುತ್ತವೆ. ಪ್ರಶ್ನಾವಳಿಗಳ ಪ್ರವಾಹ ಬತ್ತುವಂತೆ ಮಾಡಿ. ವಿಚಾರ ವಿನಿಮಯಗಳ ಚಾಕಚಕ್ಯತೆಯ ಚಕಮಕಿಗಳಿಗೆ ತೆರೆ ಎಳೆಯುವುದರಿಂದಾಗಿ ನಿದ್ರಾದೇವಿ ಮಡಿಲಲ್ಲಿ ಖುಷಿ ನೀಡುವ ಕನಸು ಕಾಣುವಂತೆ ಮಾಡುತ್ತವೆ. ಶ್ವಾಸೋಚ್ಛ್ವಾಸ ಕೇಂದ್ರ ನಿರುತ್ಸಾಹಗೊಳ್ಳುವುದು. ಪರಿಣಾಮ

ವಾಗಿ ಉಸಿರಾಟದ ತಾಳ ತಪ್ಪುವುದು. ವೇಗಲ್ ಕೇಂದ್ರ ಪ್ರಚೋದನೆಗೊಳಪಡುವುದರಿಂದ ಸ್ನಾಯು ನರಗಳ ಕೂಟದಲ್ಲಿ ಆ್ಯಸಿಟೈಲ್ ಕೋಲಿನ ಬಿಡುಗಡೆಯಾಗುವುದು. ಹೃದಯ ಬಡಿತ ಕುಗ್ಗುವುದು. ಮಾರ್ಫಿನ್ ಮತ್ತು ಹೈಯೋಸಿನ್ ಒಟ್ಟಿಗೆ ತೆಗೆದುಕೊಂಡಾಗ "ಅಪೂರ್ಣ ಪ್ರಜ್ಞಾ" ಸ್ಥಿತಿಯನ್ನು ಬಳುವಳಿಯಾಗಿ ನೀಡುತ್ತವೆ.

ಮಾದಕ ಪಾನೀಯಗಳು ಯಕೃತ್‌ನಲ್ಲಿ ಉತ್ಕರ್ಷಣೆಗೊಳಗಾಗಿ ಆಸಿಟಾಲ್ಡೆ ಹೈಡ್ ಆಗಿ ರೂಪಾಂತರಗೊಳ್ಳುವವು. ರಕ್ತದಲ್ಲಿ ಸಂಚರಿಸಿ, ಕೇಂದ್ರ ನರಮಂಡಲದ ಜೀವಕೋಶಗಳಿಗೆ ಮುತ್ತಿಗೆಹಾಕಿ, ದೈಹಿಕ ಮಾನಸಿಕ ಚಟುವಟಿಕಾ ಕೇಂದ್ರ, ವಿಚಾರಿಸುವ ಕೇಂದ್ರ, ಮಾತನಾಡುವ ಕೇಂದ್ರ, ಉಷ್ಣ ನಿಯಂತ್ರಣ ಕೇಂದ್ರಗಳ ಮೇಲೆ ಪ್ರಭಾವ ಬೀರಿ, ಕಾರ್ಯನಿರ್ವಹಣೆಯ ನಿಯಂತ್ರಣ ತಪ್ಪಿಸುತ್ತವೆ.

## ಕಾರಣಗಳು

ವಿದ್ಯಾರ್ಥಿ ಯುವಜನರು ದುರ್ವ್ಯಸನಕ್ಕೆ ತುತ್ತಾಗಲು ಕಾರಣವೇನು? ಅವರಿಗೆ ಇವುಗಳ ಪರಿಚಯ ಹೇಗಾಗುತ್ತದೆ - ಬಹುಶಃ ಈ ಕಾರಣಗಳಲ್ಲಿ ಒಂದಾಗಿರಬಹುದು.

೧. ಗಾಂಜಾ ಸೇವಿಸದರೆ ಹೇಗಿರಬಹುದೆನ್ನುವ ಕೇವಲ ಕುತೂಹಲ.

೨. ಮಾದಕ ವಸ್ತು ಸೇವಿಸಿದಾಗ ದೊರೆಯುವ 'ಕಿಕ್'(Kick)ನ ಬಗ್ಗೆ ಗೆಳೆಯರು ವಿವರಿಸಿದಾಗ ತಾವೂ ಏಕೆ ಪಡೆಯಬಾರದೆನ್ನುವ ಆಸೆ.

೩. ಮಾದಕ ವಸ್ತು ಸೇವಿಸಿದಾಗ ಮಾತ್ರ ತಾನು 'Modern' ಆಗುವೆ ಎನ್ನುವ ತಪ್ಪು ಕಲ್ಪನೆ. ಗೆಳೆಯರ ಗುಂಪಿನಲ್ಲಿ ಅನುಭವಿ ಎಂದು ಕರೆಯಿಸಿಕೊಳ್ಳುವ ಆಸೆ – ಅವರ ನಡುವೆ ಒಂದು ಮಹತ್ವದ ಸ್ಥಾನ ಪಡೆಯುವ ಆಕಾಂಕ್ಷೆ!

೪. ತಾನು ವಯಸ್ಸಿಗೆ ಬಂದಿದ್ದೇನೆ ಎಂದು ಸ್ವತಂತ್ರ ಮನೋಭಾವವನ್ನು ತೋರುವ ಉದ್ದೇಶ ಅಥವಾ ತಾನು ದ್ವೇಷಿಸುವ ವ್ಯಕ್ತಿಯ ಮೇಲೆ ರೊಚ್ಚು ತೀರಿಸಿಕೊಳ್ಳಲು ಸಾಧ್ಯವಿಲ್ಲದೆ ಬೇರೆ ಅವಕಾಶ ಬೇಕೆಂದೇ ತಪ್ಪು ಹಾದಿಯಲ್ಲಿ ನಡೆಯುವುದು – ಇಂಥವರಿಗೆ ದುಷ್ಪರಿಣಾಮಗಳ ಪರಿವೇ ಇರದು.

೫. ವಾಸ್ತವಿಕತೆಯನ್ನು ಎದುರಿಸಲಾರದೆ, ಕೀಳರಿಮೆಯನ್ನು ಮೆಟ್ಟಿನಿಲ್ಲಲಾಗದೆ, ಅಸಾಧ್ಯವಾದುದನ್ನು ಪಡೆಯುವ ಹಗಲುಗನಸು – ಎಲ್ಲಕ್ಕೂ ಸುಲಭ ಮಾರ್ಗ ಮಾದಕ ವಸ್ತು!

೬. ಆಂಫಿಟಮಿನ್ ಸೇವಿಸಿದರೆ ಹೆಚ್ಚು ಓದಬಹುದು, ಗಾಂಜಾ ಸೇವಿಸಿದರೆ ಸೃಜನಾತ್ಮಕ ಮಟ್ಟ ಹೆಚ್ಚುವುದು ಅಥವಾ ಮೋಕ್ಷವನ್ನು ಪಡೆಯಬಹುದು ಎಂಬ ಹುಚ್ಚು ಕಲ್ಪನೆ!

೭. ಮೂರು ಹೊತ್ತು ಜಗಳವಾಡುವ ತಂದೆತಾಯಿಯರನ್ನು ನೋಡುವಾಗ, ವಿಚ್ಛೇದನ ಹೊಂದಿರುವ ತಂದೆ ತಾಯಿಯರೊಡನೆ ಇರಬೇಕಾದಾಗ, ಪ್ರೀತಿಯಿಂದ ಪೂರ್ಣ ವಂಚಿತರಾದಾಗ – ದುರ್ವ್ಯಸನಿಯಾಗುವ ಸಾಧ್ಯತೆ ಹೆಚ್ಚು.

೮. ಬಡತನದ ಬವಣೆಯಿಂದ ಬೇಸತ್ತು, ನೋವು ನುಂಗಲು ಅಪ್ಪ ದುರ್ವ್ಯಸನಿಯಾದಾಗ ಮಕ್ಕಳೂ ಅವರನ್ನು ಅನುಸರಿಸಬಹುದು.

೯. ನಗರೀಕರಣ, ಔದ್ಯೋಗೀಕರಣ, ಪಾಶ್ಚಾತೀಕರಣಗಳ ಪ್ರಭಾವ.

ತರುಣರು ಮಾದಕ ವಸ್ತುಗಳ ಮೊರೆ ಹೋಗುವುದು ಏಕೆ? ಅಮೇರಿಕದಲ್ಲಿ ನಡೆಸಿದ –




ಅಧ್ಯಯನ ಕಾರಣ ಹುಡುಕಿ ತೆಗೆದಿದೆ. ಇವುಗಳನ್ನು ಚಿತ್ರದಲ್ಲಿ (ತ್ರಿಕೋನ) ಹಿಡಿದಿಡಲಾಗಿದೆ.

"೧೬–೨೫ ವಯಸ್ಸಿನವರಲ್ಲಿ ಔಷಧಿ ಬಳಕೆ" ("Drug uses in the age of 16-25)" ಮಾರ್ಮಿಕವಾಗಿ ಈ

ಮಾಹಿತಿಯನ್ನು ಮನಮುಟ್ಟುವಂತೆ ನೀಡುತ್ತದೆ. ಕಾರಣಗಳು, ಪ್ರತಿಶತ ಹಾವಳಿ. ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ಆಗಿರಬಹುದು. ಸಮಾಜವನ್ನು, ಶಾಂತಿಯನ್ನು ಛಿದ್ರ ಛಿದ್ರ ಮಾಡುವ ವಿಶ್ವ ಸಮಸ್ಯೆಯಾಗಿರುವುದಂತೂ ಸತ್ಯ. ವ್ಯಸನಿಗಳಿದ್ದ ನಾಡು ಪಾಪದ ಬೀಡು. ಅದು ದುರ್ವಾಸನೆಯಿಂದ ತನ್ನ ಮತ್ತು ತನ್ನ ಸುತ್ತಮುತ್ತಲಿನ ಪರಿಸರವನ್ನು ಮಲಿನಗೊಳಿಸಿ ಅನಂತರ ಇಡೀ ರಾಷ್ಟ್ರವನ್ನೇ ಕಬಳಿಸಿ ಅದರ ಅಧೋಗತಿಗೆ ಕಾರಣವಾಗಬಲ್ಲದು. ಸಂಗದೋಷದ ಬಗ್ಗೆ ಸರ್ವಜ್ಞ ಬಹು ಹಿಂದೆಯೇ ಎಚ್ಚರಿಸಿದ್ದಾನೆ.

"ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ,
ದುರ್ಜನರ ಸಂಗದೊಡನಾಟ । ಬಚ್ಚಲದ
ರೊಜ್ಜಿನಂತಿಹುದು ಸರ್ವಜ್ಞ"

ಮಾದಕ ವಸ್ತುಗಳ ಅವಲಂಬನೆಗೆ ಕಾರಣವಾಗಿರುವ ಕಾರಣಗಳಲ್ಲಿಯೇ ಮಾರಕವಾದಂತಹವು ತ್ರಿಕೋನಕ್ಕೆ ತಳಪಾಯವಾಗಿವೆ. ಅವುಗಳೊಡನೆ ಆಗೊಮ್ಮೆ ಈಗೊಮ್ಮೆ ಚೆಲ್ಲಾಟವಾಡುವವರು ತ್ರಿಕೋನದ ತುದಿಯಲ್ಲಿರುವರು. ಜನರು ಬೇಸರದ ಬೇಗೆಯಿಂದ ಮುಕ್ತರಾಗಲು ಮತ್ತಿನ ವಸ್ತುಗಳ ಆಸರೆ ಪಡೆಯುವರು. ಸಂತೋಷದಿಂದ ಸಮಯ ಕಳೆಯುವ ನೆವದಿಂದ ಇವುಗಳ ಮೋಸದ ಜಾಲದಲ್ಲಿ ಜಾರಿ ಬೀಳುವರು.

ಕಣ್ಮರೆಯಾಗುತ್ತಿರುವ ಕ್ರಿಯಾಶೀಲತೆ ಇದರ ಹಾವಳಿಗೆ ನಾಂದಿ ಹಾಡುತ್ತದೆ.

## ಅಯಸ್ಕಾಂತದ ಆಕರ್ಷಣೆ

ಜಗದ ಜಂಜಾಟಗಳನ್ನು ಮರೆಸಿ, ರಂಗುರಂಗಿನ ರಮ್ಯ ರಮಣೀಯ ಲೋಕಕ್ಕೆ ಕೊಂಡೊಯ್ದು, ಊಹಾತೀತವಾದ ಚಿತ್ರವಿಚಿತ್ರ ಅನುಭವಗಳನ್ನಿತ್ತು, ಆನಂದಾನುಭೂತಿಯನ್ನು ನೀಡಿ, ಮನಸ್ಸನ್ನು ಅಯಸ್ಕಾಂತದಂತೆ ಆಕರ್ಷಿಸಿ, ವ್ಯಕ್ತಿಗಳ ದೌರ್ಬಲ್ಯ ದಮನಮಾಡುವಂತೆ ನಟಿಸಿ, ಆ ದೌರ್ಬಲ್ಯದ ಸುತ್ತ ನೂಲು ನೇಯ್ದು, ಮರಳು ಮಾಡಿ, ಹೆಡಮುರಿಗೆ ಕಟ್ಟಿ ಅತ್ತಿತ್ತ ಮಿಸುಕದಂತೆ ಮಾಡುತ್ತವೆ.

ಆಲಸ್ಯ, ಆಯಾಸಗಳನ್ನು ಅಳಿಸಿ, ಹಸಿವನ್ನು ಹೆಚ್ಚಿಸಿ, ಲವಲವಿಕೆ ಲಾಸ್ಯಮಾಡುವಂತೆ ಮದ್ಯ ಮಾಡಬಲ್ಲುವುದಾದರೆ, ಪೆಡಂಭೂತಗಳಂತೆ ಪೀಡಿಸುವ ನೋವನ್ನು ನಿವಾರಿಸಿ ಕಣ್ತುಂಬ ನಿದ್ರೆ ತರಬಲ್ಲವು. ಬಾರ್ಬಿಚುರೇಟ್, ಮಾರ್ಫಿನ್ ಗುಂಪಿನ ಮದ್ದುಗಳು. ಮನಸ್ಸಿನ ವ್ಯಾಕುಲತೆ, ಉದ್ರೇಕ, ಉದ್ವೇಗವನ್ನು ನೆಮ್ಮದಿಕಾರಿ ಔಷಧಿಗಳು ಬಗ್ಗುಬಡಿದರೆ, ಗಾಂಜಾ, ಎಲ್.ಎಸ್.ಡಿ.ಗಳು ಭ್ರಮೆಯ ಕಿನ್ನರ ಲೋಕವನ್ನೇ ಸೃಷ್ಟಿಸುತ್ತವೆ. ಸೇವಿಸುವವರಿಗೆ ಮೊದಮೊದಲು ಹಿತವನ್ನು ನೀಡಿ, ಬುಟ್ಟಿಗೆ ಹಾಕಿಕೊಳ್ಳುತ್ತವೆ. ಕ್ರಮೇಣ ತಮ್ಮ ಶರಪಂಜರದಲ್ಲಿ ಬಂದಿಸಿ ಅವರ ಮೇಲೆ ಸವಾರಿ ಮಾಡಿ,

ಅವರನ್ನೇ ನುಂಗಿ ನೀರು ಕುಡಿಯುತ್ತವೆ – ಕಾಲು ಬಿದ್ದು ಕಾಲುಂಗರ ಬಿಚ್ಚಿಕೊಳ್ಳುವ ಹಾಗೆ.

ಪ್ರಾರಂಭದಲ್ಲಿ ಅಲ್ಪ ಸ್ವಲ್ಪ ಪ್ರಮಾಣಕ್ಕೆ ಖುಷಿ ಕೊಡುವ ಮಾದಕ ಔಷಧಿಗಳು ಆ ಖುಷಿಯನ್ನು ದಿನಗಳೆದಂತೆ ಕೊಡುವಲ್ಲಿ ವಿಫಲವಾಗುವವು. ಮೊದಲಿನ ಖುಷಿಯನ್ನು ಪಡೆಯುವ ಮನೋಭಾವಕ್ಕೆ ಮಣಿದು ಹೆಚ್ಚು ಹೆಚ್ಚು ಪ್ರಮಾಣ ಸೇವಿಸುತ್ತ ಹೋಗುವುದು ಅನಿವಾರ್ಯವಾಗುತ್ತದೆ. ತಾಳಿಕೆ, ಮಾನಸಿಕ ಅವಲಂಬನೆಯ ನಂತರ, ವ್ಯಸನಿಗಳಾಗುವ ಪೂರ್ವದಲ್ಲಿ ಅವರು ತಾಳಿಕೆ (Tolerance)ಯನ್ನು ಬೆಳೆಸಿಕೊಳ್ಳುವರು. ಇಲ್ಲಿ 'ತಾಳಿಕೆ' ಅಂದರೆ, ಮೊದಲು ತೆಗೆದುಕೊಂಡಷ್ಟೇ ಶಕ್ತಿಸಾಮರ್ಥ್ಯದ. ಅಷ್ಟೇ ಪ್ರಮಾಣದ ಔಷಧಿ ಸೇವಿಸಿದಾಗ, ಸಕಾರಾತ್ಮಕ ಪರಿಣಾಗಳು ಪ್ರಕಟಗೊಳ್ಳದೇ ಇರುವುದು ಅಥವಾ ಮೊದಲಿನಂತೆ ಔಷಧಿಗೆ ಪ್ರತಿಕ್ರಿಯೆ ತೋರಿಸಲು ಹೆಚ್ಚು ಪ್ರಮಾಣದ ಔಷಧಿ ಸೇವಿಸುವುದು.

ಉದಾ: ತಲೆನೋವಿನಿಂದ ಮುಕ್ತರಾಗಲು ಮೊದ ಮೊದಲು ಕೇವಲ ಎರಡು ಆಸ್ಪಿರಿನ್ ಗುಳಿಗೆ ಸಾಕಾಗಬಹುದು. ಅದೇ ರೂಢಿ ಮುಂದುವರೆದಲ್ಲಿ, ಎರಡು ತಿಂಗಳ ನಂತರ ಅದೇ ತಲೆನೋವಿನ ನಿಯಂತ್ರಣಕ್ಕೆ ನಾಲ್ಕು ತಾಸುಗಳಿಗೊಮ್ಮೆ ಎರಡು ಗುಳಿಗೆ ಸೇವಿಸಬೇಕಾಗುವುದು ಅಥವಾ ಎರಡು ಆಸ್ಪಿರಿನ್ ಗುಳಿಗೆಯನ್ನು ಮೊದಲಿನಂತೆ ತೆಗೆದುಕೊಂಡರೆ ಯಾವುದೇ ಪರಿಣಾಮ ಕಂಡುಬರುವುದಿಲ್ಲ.

ಮಾದಕವಸ್ತುಗಳಲ್ಲಿ ಈ ತಾಳಿಕೆಯು ಇನ್ನಷ್ಟು ತ್ವರಿತವಾಗಿ ಬೆಳೆಯುವುದು. ಮೊದಲಿನ ಸಂತೋಷ, ಆನಂದಾನುಭೂತಿ ಒತ್ತಟ್ಟಿಗಿರಲಿ, ಸಾಮಾನ್ಯ (Normal)ನಂತೆ ಇರಲು ಸಹ ಹೆಚ್ಚು ಹೆಚ್ಚು ಔಷಧಿ ಸೇವಿಸುವುದು ಅನಿವಾರ್ಯ. ಮೆದುಳಿನ ಜೀವಕೋಶಗಳು ಮಾದಕ ಔಷಧಿಗಾಗಿ ಹಪಹಪಿಸುವವು. ಹೀಗಾಗಿ 'ಅವಲಂಬನೆ' (Dependency) ಅನಿವಾರ್ಯವಾಗಿ ಅಪ್ಪಿಕೊಳ್ಳುವುದು. ಅವಲಂಬನೆ ನಾಲ್ಕು ಹಂತಗಳಲ್ಲಿ ಹಾಯ್ದು ಗಟ್ಟಿಗೊಳ್ಳುವುದು.

**ಹಂತ – I:** ಮಾದಕ ವಸ್ತುಗಳು ಖುಷಿ ಕೊಡುತ್ತವೆ ಎಂಬ ಭ್ರಮೆಯಲ್ಲಿ ವ್ಯಕ್ತಿ ಸೇವಿಸಲು ಕಲಿಯುವನು. ಕೆಲಹೊತ್ತಿನ ನಂತರ ಅದರ ಪ್ರಭಾವ ಕುಗ್ಗಿದ ಮೇಲೆ ಮತ್ತೆ ಸಾಮಾನ್ಯ ಸ್ಥಿತಿಗೆ ಮರಳುವನು.




**ಹಂತ – II:** ಸುಳ್ಳು ಸ್ವರ್ಗದ ಸವಿಯನ್ನು ಸವಿಯಲು ಮತ್ತಿನ ವಸ್ತುಗಳ ಸುಳಿಯಲ್ಲಿ ಗಿರಕಿ ಹೊಡೆಯುವರು. ಮುಂದಿನ ಹಂತಕ್ಕೆ ಹಾದಿ ಮಾಡುವರು.



**ಹಂತ – III:** ಒಂದು ವೇಳೆ ಸಕಾಲದಲ್ಲಿ ಔಷಧಿ ಸೇವಿಸದಿದ್ದರೆ ಅಥವಾ ಮಾದಕ ವಸ್ತುಗಳನ್ನು ಸೇವಿಸದಂತೆ ನಿರ್ಬಂಧ ಹಾಕಿದಾಗ ನೋವು ಕಾಣಿಸಿಕೊಳ್ಳುವುದು. ವ್ಯಸನಿ ಮಾದಕ ವಸ್ತುವಿಗಾಗಿ ಚಡಪಡಿಸುವನು – ನೀರಿನಿಂದ ಹೊರತೆಗೆದ ಮೀನಿನಂತೆ.




ಕ್ಷಣದಲ್ಲಿ ಸಾಮಾನ್ಯ ಸ್ಥಿತಿಗೆ ಮರಳುವುದು.

**ಹಂತ – IV:** ಈ ಹಂತಕ್ಕೆ ಮುಟ್ಟಿದಾಗ, ಸಕಾಲಕ್ಕೆ ಮಾದಕ ವಸ್ತು ಸೇವಿಸದಿದ್ದಾಗ, ಸಹಿಸಲಸಾಧ್ಯವಾದ ನೋವಿನಿಂದ ನರಳುವರು. ಇಲ್ಲಿ ಔಷಧಿ ಸೇವಿಸುವವರ ಗುರಿ ಖುಷಿ ಪಡಲು ಅಲ್ಲ. ನೋವಿನಿಂದ ಮುಕ್ತವಾಗಲು ಅಷ್ಟೇ.




ಮತ್ತಿನ ವಸ್ತು ಸೇವಿಸದಿದ್ದರೆ

ಸಾಮಾನ್ಯಸ್ಥಿತಿ ಉಳಿಯುವುದಿಲ್ಲ.

ಆಹಾರವಿಲ್ಲದಾಗ ಹಸುವಿನಿಂದ ಹಪಹಪಿಸಿ ಕಂಗೆಡುವಂತೆ ಮಾದಕ ಔಷಧಿ ಮರೀಚಿಕೆಯಾದಾಗ ವ್ಯಸನಿ ಪರಿತಪಿಸಿ ಕಂಗೆಡುವರು. ಮಾದಕ ವಸ್ತುಗಳ ಮೋಹದ ಆಳ, ಊಹೆಗೆ ನಿಲುಕದ್ದು. ಅದನ್ನು ಪಡೆಯಲು ತಮ್ಮಲ್ಲಿಯ ಯುಕ್ತಿ

ಶಕ್ತಿ ಸಾಮರ್ಥ್ಯಗಳನ್ನೆಲ್ಲ ಬಳಸುವರು. ಈ ಆಸೆಯ ಮುಂದೆ ವೈಯಕ್ತಿಕ, ಸಾಮಾಜಿಕ, ನೈತಿಕ ಕಟ್ಟುನಿಟ್ಟುಗಳು ಕರಗಿಹೋಗುವವು – ಬಿಸಿಲಿಗಿಟ್ಟ ಬರ್ಫದಂತೆ. ಯಾವ ಮಾರ್ಗವಾದರೂ ಸರಿ, ಅದನ್ನು ಪಡೆಯುವುದೇ ವ್ಯಕ್ತಿಯ ಪರಮ ಗುರಿಯಾಗುತ್ತದೆ. ಇದಕ್ಕಾಗಿ ಎಂಥಹ ಹೇಯ ಕೃತ್ಯಕ್ಕೂ ಹೇಸುವುದಿಲ್ಲ. ಈ ಬಗೆಯ ಚಟಗಳ ಸರಣಿಯ ಪರಿಣಾಮಗಳನ್ನು ಸಂಸ್ಕೃತ ಶ್ಲೋಕವೊಂದು ಮಾರ್ಮಿಕವಾಗಿ ಚಿತ್ರಿಸಿದೆ –

"ಭಿಕ್ಷೋ! ಮಾಂಸ ನಿಷೇವಣಂ ಪ್ರಕುರುಷೆ? ಕಿಂತೇನ
ಮದ್ಯಂವಿನಾಃ
ಮದ್ಯಂ ಚಾಪಿ ತವಪ್ರಿಯಂ? ಪ್ರಿಯಮಹೋ
ವೇಶ್ಯಾಂಗನಾಭಿಸ್ಸಹ
ವೇಶ್ಯಾದ್ರವ್ಯರುಚಿಃ ಕುತಸ್ತವ ಧನಂ? ದ್ಯೂತೇನ
ಚೌರ್ಯೇಣವಾ
ಚೌರ್ಯದ್ಯೂತ ಪರಿಗ್ರಹೋಽಪಿ ಭವತಾ? ಭಷ್ಟಸ್ಯ
ಕಾನ್ಯಾ ಗತಿಃ?"

"ಮತ್ತ ಪಸ್ಯಃ ಕತಃ ಸುಖಿಮ್." ಮತ್ತಿನ ಔಷಧಿ ಸೇವಿಸುವವಗೆ ಸುಖ ಎಲ್ಲಿ ಎಂಬ ಮಾತು ಅಕ್ಷರ ಸಹ ಸತ್ಯ. ಮಾದಕ ಔಷಧಿಗಳ ಪ್ರಭಾವಕ್ಕೆ ಸಿಕ್ಕ ದೇಹ ಗೆದ್ದಲು ಹತ್ತಿದ ಮರದಂತಾಗುತ್ತದೆ. ಶರೀರದ ವಿವಿಧ ಜೈವಿಕ ಹಾಗೂ ರಸಾಯನಿಕ ಕ್ರಿಯೆಗಳ ತಾಳ ತಪ್ಪಿ ಆಹಾರದ ಚಯಾಪಚಯ,

ಸಂಸ್ಕರಣ, ಶೇಖರಣೆಗಳಲ್ಲಿ, ಮಲಿನ ವಸ್ತುಗಳ ಹೊರಹಾಕುವಿಕೆ ಮುಂತಾದ ದೈನಂದಿನ ಚಟುವಟಿಕೆಗಳಲ್ಲಿ, ವೈಪರಿತ್ಯಗಳು ತಲೆದೋರುತ್ತವೆ. ಅಮಲಿನ ಆನಂದದ ಗುಂಗಿನಲ್ಲಿ ಆಹಾರ ಸೇವಿಸುವುದಿಲ್ಲ. ಪೋಷಕಾಂಶಗಳ, ಪೋಷ್ಟಿಕಾಂಶಗಳ, ಜೀವಸತ್ವಗಳ ಕೊರತೆಯ ಕೊರಗಿನ ಕಳೆ ಜಿಗಿಯುತ್ತದೆ. ರಕ್ತಹೀನತೆ ಮುತ್ತುತ್ತದೆ. ನಿಶ್ಯಕ್ತಿ, ನಿರಾಶಕ್ತಿ ನರ್ತನಗೈಯುವವು. ರೋಗ ಪ್ರತಿರೋಧಕ ಶಕ್ತಿ ಕುಗ್ಗುವುದು. ಇದರ ದುರುಪಯೋಗ ಪಡೆಯಲು ಸೂಕ್ಷ್ಮಾಣುಗಳ ದಂಡು ಓರಿ ಓರಿ ಹಿಗ್ಗುವುದು. ವ್ಯಸನಿ, ರೋಗಾಣುಗಳನ್ನು, ರೋಗಗಳನ್ನು ಆದರದಿಂದ ಸ್ವಾಗತಿಸುವ 'ರಿಸೆಪ್ಸನಿಸ್ಟ್' ಆಗುವನು.

## ದುಷ್ಪರಿಣಾಮಗಳು

ಮಾದಕ ವಸ್ತುಗಳ ದುರುಪಯೋಗದಿಂದ ಆಗಿರುವ ದುಷ್ಪರಿಣಾಮಗಳನ್ನು ದೈಹಿಕ, ಮಾನಸಿಕ ಹಾಗೂ ಸಾಮಾಜಿಕವಾಗಿ ವಿಂಗಡಿಸಲಾಗಿದೆ.

**ದೈಹಿಕ ದುಷ್ಪರಿಣಾಮಗಳು:**

೧. ದುರ್ವ್ಯಸನಿ ಕಾಲಕಾಲಕ್ಕೆ ಆಹಾರವನ್ನು ತೆಗೆದುಕೊಳ್ಳಲು ಮರೆಯುವ ಕಾರಣ, ಹಸಿವು ಕ್ರಮೇಣ ಹಿಂಗುತ್ತದೆ.

೨. ಆಹಾರಾಂಶಗಳ ಕೊರತೆಯಿಂದ ಶಕ್ತಿಹೀನನಾಗಿ ಸೋಮಾರಿಯಾಗುತ್ತಾನೆ. ಹಾಗಾಗಿ ಸೋಂಕು ರೋಗಗಳು ಬರಬಹುದು.

೩. ಮಾದಕ ಔಷಧಿ ಕಾಲಕಾಲಕ್ಕೆ ಸಿಗುತ್ತಲೇ ಇರಬೇಕು. ಇಲ್ಲದಿದ್ದಲ್ಲಿ ಚಳಿ, ಜ್ವರ, ನಡುಕ, ರಕ್ತದ ಒತ್ತಡ ಏರಿ ಹುಚ್ಚನಂತೆ ಚೀರಲಾರಂಭಿಸುವನು. ಮತ್ತಿನ ಔಷಧಿ ಸಿಕ್ಕಾಗಲೇ ನೆಮ್ಮದಿ.

೪. ದುರ್ವ್ಯಸನಿಗಳು ಶುಚಿತ್ವಕ್ಕೆ ಎಂದೂ ಗಮನವನ್ನು ಕೊಡುವುದಿಲ್ಲ.

೫. ಮತ್ತಿನಲ್ಲಿ ನೋವು ತಿಳಿಯುವ ಸ್ಥಿತಿ ಇರದ ಕಾರಣ ಅಪೆಂಡಿಸೈಟಿಸ್ ಮುಂತಾದವುಗಳಿಂದ ಅವನಿಗೆ ಸಾವು ಬಲು ಸಮೀಪ.

೬. ದುರ್ವ್ಯಸನಿ ಸುತ್ತಮುತ್ತಲಿನ ಪರಿಸರ ಪ್ರಜ್ಞೆಯನ್ನು ಕಳೆದುಕೊಂಡಿರುವ ಕಾರಣ, ಕೈಯಲ್ಲಿರುವ ಸಿಗರೇಟ್ ಜಾರಿ ಬಟ್ಟೆ, ಹಾಸಿಗೆ ಹೊತ್ತಿಕೊಂಡು ತಾನೂ ಸಾಯಬಹುದು, ಇತರರನ್ನೂ ಸಾಯಿಸಬಹುದು.

೭. ಮತ್ತಿನಲ್ಲಿ ವಾಹನಗಳನ್ನು ನಡೆಸುವಾಗ ಮೈಮನಸ್ಸಿನ ಮೇಲೆ ಹಿಡಿತವಿರದ ಕಾರಣ ಅಪಘಾತಗಳು ತೀರಾ ಸಾಮಾನ್ಯ

೮. ಮಾರ್ಫಿನ್, ಹೆರಾಯಿನ್‌ಗಳನ್ನು ರಕ್ತನಾಳದೊಳಗೆ ಚುಚ್ಚಿಕೊಳ್ಳುವ ಕಾರಣ ಅವೆಲ್ಲ ಗಂಟುಕಟ್ಟಿಕೊಳ್ಳುತ್ತವೆ. ಕೊನೆಗೆ ದುರ್ವ್ಯಸನಿ ಮುಖ ಮತ್ತು ನಾಲಿಗೆಯಲ್ಲಿರುವ ರಕ್ತನಾಳಗಳನ್ನು ಹುಡುಕಿ ಹುಡುಕಿ ಚುಚ್ಚಿದಾಗ, ಉಂಟಾಗುವ ತೊಂದರೆಗಳು ಅನೇಕ.

**ಮಾನಸಿಕ ದುಷ್ಪರಿಣಾಮಗಳು:**

೧. ದುರ್ವ್ಯಸನಿ ತನ್ನ ಕರ್ತವ್ಯವನ್ನು ಮರೆಯುತ್ತಾನೆ. ಹಾಗಾಗಿ ವಿದ್ಯೆ ನೈವೇದ್ಯ!

೨. ಪ್ರಾಮಾಣಿಕತೆ ಮಾಯವಾಗಿ ಮಾದಕ ವಸ್ತು ಕೊಳ್ಳಲು ಸುಳ್ಳು ಹೇಳುತ್ತಾನೆ. ಮೋಸ ಮಾಡುತ್ತಾನೆ. ಕದ್ದು ವಸ್ತುಗಳನ್ನು ಮಾರಾಟ ಮಾಡುತ್ತಾನೆ. ಕಾಳಸಂತೆ, ಕಳ್ಳ ಮಾರಾಟ ಸಾಮಾನ್ಯ.

೩. ಬ್ರಹ್ಮಚರ್ಯೆ ಅಥವಾ ಕೌಮಾರ್ಯದ ಪಾವಿತ್ರ್ಯತೆ ಮರೆಯಾಗುವ ಕಾರಣ, ಲೈಂಗಿಕ ರೋಗಗಳು ಸರ್ವಸಾಮಾನ್ಯ. ತಮ್ಮ ದೇಹವನ್ನು ಮಾರಾಟ ಮಾಡುವದೆಂದರೆ ನೀರು ಕುಡಿದಷ್ಟು ಸಲೀಸು. ಇಂತವರು ಏಡ್ಸ್ (AIDS) ಹರಡಲು ಪ್ರಮುಖ ಕಾರಣರು.

**ಕೋಷ್ಟಕ ೧**

ವಿದ್ಯಾಭ್ಯಾಸ ಮಾಡುವ ಸ್ಥಳದಲ್ಲಿ ಮಾದಕ ವಸ್ತುಗಳ ದುರಭ್ಯಾಸಕ್ಕೆ ಬಲಿಯಾದ ಪ್ರಮಾಣ

| ವಿದ್ಯಾಭ್ಯಾಸ ಸ್ಥಳ | ವ್ಯಸನಿಗಳಾದವರು % | ವ್ಯಸನಿಗಳಾಗದವರು % |
|---|---|---|
| ತಂದೆತಾಯಿಗಳ ಜೊತೆ | ೧೧.೧ | ೮೮.೯ |
| ಸಂಬಂಧಿಕರ ಜೊತೆ | ೨೦.೩ | ೭೯.೭ |
| ಬೋರ್ಡಿಂಗ್ ಶಾಲೆ | ೩೦.೨ | ೬೯.೮ |
| ಹಾಸ್ಟೇಲ್ | ೧೭.೭ | ೮೨.೩ |
| ಇತರೆ ಸ್ಥಳಗಳು | ೨೫.೦ | ೭೫.೦ |

೪. ದೇವರು, ಧರ್ಮ, ನ್ಯಾಯ, ನೀತಿ, ಸತ್ಯ, ಹಿರಿಯರಲ್ಲಿ ಗೌರವ ಎಲ್ಲಾ ಮಾಯ. ತನಗೊಂದು ವ್ಯಕ್ತಿತ್ವವಿದೆ ಎಂದು ಮರೆಯುವ ಕಾರಣ, ಅವನ ನೈತಿಕ ಅಧಃಪತನ ಖಂಡಿತ.

೫. ಚಿತ್ತ ಭ್ರಮೆಯಾಗುವ ಕಾರಣ ಆತ್ಮಹತ್ಯೆ ಮಾಡಿಕೊಳ್ಳ ಬಹುದು ಅಥವಾ ಯಾರನ್ನಾದರೂ ಕೊಲ್ಲಬಹುದು.

**ಸಾಮಾಜಿಕ ದುಷ್ಪರಿಣಾಮಗಳು:**

೧. ದುರ್ವ್ಯಸನಿ ಸಾಮಾನ್ಯನಾಗಿ ಮದುವೆಯಾಗಲು ಇಚ್ಛಿಸುವುದಿಲ್ಲ. ಮದುವೆಯಾದರೂ ಬಹಳ ಕಾಲ ಸಹಬಾಳ್ವೆ ನಡೆಸಲಾರ. ವಿಚ್ಛೇದನ ಸರ್ವೇಸಾಮಾನ್ಯ.

೨. ಇವರಲ್ಲಿ ನಪುಂಸಕತ್ವ ತಲೆದೋರಬಹುದು; ಮಕ್ಕಳು ಹುಟ್ಟಿದರೂ ಅಂಗಹೀನರಾಗುವ ಅಥವಾ ವಿರೂಪಗೊಳ್ಳುವ ಸಾಧ್ಯತೆ ಹೆಚ್ಚು.

೩. ಇಂಥವರಿಂದ ವೇಶ್ಯಾವಾಟಿಕೆ, ಲೈಂಗಿಕ ರೋಗಗಳು, ಏಡ್ಸ್, ಲೈಂಗಿಕ ಅಪರಾಧಗಳು, ಕೊಲೆ, ಸುಲಿಗೆ, ಕಳ್ಳಸಾಗಾಣಿಕೆ ಹೆಚ್ಚುವುದರಿಂದ ಇವರು ಸಮಾಜಕ್ಕೊಂದು ದೊಡ್ಡ ಸಮಸ್ಯೆ. ಹೀಗಾಗಿ ಸಾಮಾಜಿಕ ನಿರ್ಲಕ್ಷ್ಯಕ್ಕೆ, ದ್ವೇಷಕ್ಕೆ, ತುಚ್ಛೀಕಾರಕ್ಕೆ ತುತ್ತಾಗುತ್ತಾರೆ.

# ಮನೆಯೇ ಮೊದಲ ಪಾಠಶಾಲೆ

ಮನೆಯೇ ಮೊದಲ ಪಾಠಶಾಲೆ ಎನ್ನುವ ಕವಿವಾಣಿ ಅಕ್ಷರಶಃ ಸತ್ಯ. ಪಾಠಶಾಲೆಯ ವಾತಾವರಣವೇ ಸರಿಯಿಲ್ಲದಿರುವಾಗ ವಿದ್ಯಾರ್ಥಿಗಳು ದಾರಿ ತಪ್ಪುವುದು ಸಹಜ. ಆಗ ದೂರಬೇಕಾದದ್ದು ಅಧ್ಯಾಪಕರನ್ನೇ ಹೊರತು ವಿದ್ಯಾರ್ಥಿಗಳನ್ನಲ್ಲ!

ಇಂದಿನ ವಿದ್ಯಾರ್ಥಿ, ಯುವಜನಾಂಗ ವ್ಯಸನಿಗಳಾಗಲು ಅವರ ತಂದೆತಾಯಿಯರೇ ಮುಖ್ಯಕಾರಣ. ತಮಗೂ ತಮ್ಮ ಮಕ್ಕಳಿಗೂ ಇರುವ ತಲೆಮಾರಿನ ಅಂತರದ ಬಗೆಗೆ ಎಂದೂ ಆಲೋಚಿಸದೆ, ತಾವು ಬಾಲ್ಯದಲ್ಲಿ ಹೇಗಿದ್ದೆವೋ ಹಾಗೇ ತಮ್ಮ ಮಕ್ಕಳು ಇರಬೇಕೆಂದು ಬಯಸುವುದು ಮೂರ್ಖತನ. ಇವರು ಚಿಕ್ಕವರಾಗಿದ್ದಾಗ ಸರಿಯಾಗಿ ವಿದ್ಯುದ್ದೀಪಗಳನ್ನಾದರೂ ನೋಡಿದ್ದಾರೋ ಇಲ್ಲವೋ? ಆದರೆ ಇಂದಿನ ಮಕ್ಕಳು ಕಣ್ಣು ಬಿಡುವುದೇ ರೇಡಿಯೋ, ಟಿ.ವಿ., ಸಿನಿಮಾ, ವಿಮಾನ, ರಾಕೆಟ್‌ಗಳ ನಡುವೆ! ಈ ನಗರೀಕರಣ, ವೈಜ್ಞಾನೀಕರಣ ಅವರ ಮೇಲೆ ಯಾವರೀತಿ ಪ್ರಭಾವ ಬೀರಿದೆ ಎಂದು ಆಲೋಚಿಸಿದ್ದಾರೆಯೇ?

ತಮ್ಮ ಮಕ್ಕಳಿಗೆ ಬೇಕಾದುದನ್ನೆಲ್ಲಾ ಕೊಟ್ಟಿದ್ದೇವೆ, ಆದರೂ ಹೇಳಿದ ಮಾತು ಕೇಳುವುದಿಲ್ಲ, ತಪ್ಪು ಹಾದಿಯಲ್ಲಿ ನಡೆಯುತ್ತಿದ್ದಾರೆ ಎಂಬ ದೂರು ಬಹಳಷ್ಟು ತಂದೆತಾಯಿಯರು ನೀಡುವರು. ಅಂಥವರು ದಯವಿಟ್ಟು ಈ ಪ್ರಶ್ನೆಗಳಿಗೆ

ಪ್ರಾಮಾಣಿಕವಾಗಿ ಉತ್ತರಿಸಿ. ಎಲ್ಲಿ ಎಡವಿದ್ದೀರಿ ಎನ್ನುವುದು ನಿಮಗೇನೇ ತಿಳಿಯುತ್ತದೆ.

**ತಂದೆಗೆ ಪ್ರಶ್ನೆಗಳು.**

ನಿಮ್ಮ ಮಗುವು ನಿಮ್ಮ ಜೊತೆಯಲ್ಲಿರದೆ, ಬೋರ್ಡಿಂಗ್ ಶಾಲೆ, ಹಾಸ್ಟೇಲ್ ಅಥವಾ ಸಂಬಂಧಿಕರ ಮನೆಯಲ್ಲಿ ಇದ್ದು ಓದುತ್ತಿದ್ದರೆ ಈ ಪ್ರಶ್ನೆಗಳು ನಿಮಗೆ ಮಾದರಿಯಾಗಬಲ್ಲವು. (ಕೋಷ್ಟಕ ೧)

**ಕೋಷ್ಟಕ ೨**

ತಂದೆ ತಾಯಿಗಳ ದುರಭ್ಯಾಸ ಮಕ್ಕಳ ಮೇಲೆ ಬೀರುವ ಪ್ರಭಾವದ ಪ್ರಮಾಣ

| ತಂದೆತಾಯಿಗಳ ದುರಭ್ಯಾಸ | ಅದೇ ದುರಭ್ಯಾಸ ಮಕ್ಕಳಲ್ಲಿ % | ಮಾದಕ ವಸ್ತುಗಳ ದುರಭ್ಯಾಸಕ್ಕೆ ಬಲಿ ಬೀಳುವ ಸಾಧ್ಯತೆ % |
|---|---|---|
| ಧೂಮ್ರಪಾನಿಗಳು | ೫೪.೨% | ೧೭.೭% |
| ಮದ್ಯಪಾನಿಗಳು | ೬೮.೪% | ೨೩.೮% |

೧. ನಿಮ್ಮ ಮಗುವಿರುವ ಬೋರ್ಡಿಂಗ್ ಶಾಲೆ/ಹಾಸ್ಟೇಲ್ ದುಬಾರಿಯಾದುದೆ? ಸಂಬಂಧಿಕರು ಅತ್ಯಂತ ಶ್ರೀಮಂತರೆ?

೨. ಇಂತಹ ಶಾಲೆಯಲ್ಲಿ ಓದಿಸುವುದೇ ಅತ್ಯುತ್ತಮ ಮಾರ್ಗ ಎಂದು ನಿಮಗನಿಸಿದೆಯೆ?

೩. ನಿಮ್ಮ ಮಗುವನ್ನು ಎಷ್ಟು ದಿವಸಕ್ಕೊಮ್ಮೆ ಸಂಧಿಸುತ್ತೀರಿ? ಅಥವಾ ಬರೀ ಪೋಷಕರ ದಿನಾಚರಣೆಯಂದು ಮಾತ್ರವೆ?

೪. ಆಗಾಗ್ಗೆ ಮಗುವಿನ ವಿದ್ಯಾಭ್ಯಾಸದ, ಪ್ರಗತಿಯ ಬಗೆಗೆ ಪ್ರತ್ಯಕ್ಷವಾಗಿ/ಕಾಗದದ ಮುಖಾಂತರ ಅಧ್ಯಾಪಕರಿಗೆ/ ಸಂಬಂಧಿಕರಿಗೆ ಬರೆದು ತಿಳಿಯುವಿರಾ?

೫. ಅಧ್ಯಾಪಕ ವರ್ಗಕ್ಕೆ/ ಸಂಬಂಧಿಕರಿಗೆ ಆಗಾಗ್ಗೆ ಉಡುಗೊರೆಗಳನ್ನು ನೀಡುವಿರಾ ?

೬. ರಜೆಯಲ್ಲಿ ಮಗು ಮನೆಗೆ ಬಂದಾಗ, ನಿಮ್ಮ ವೇಳಾಪಟ್ಟಿಯನ್ನು ಬದಲಿಸಿ ಸಾಧ್ಯವಾದಷ್ಟೂ ಹೆಚ್ಚು ಕಾಲವನ್ನು ಮಗುವಿನೊಡನೆ ಕಳೆಯುವಿರಾ ?

ಮಗು ನಿಮ್ಮ ಜೊತೆಯಲ್ಲಿಯೇ ಇದ್ದು ಓದುತ್ತಿದ್ದರೆ ಈ ಮಾದರೀ ಪ್ರಶ್ನೆಗಳನ್ನು ಗಮನಿಸಿ – (ಕೋಷ್ಟಕ ೨)

೧. ನೀವು ಕಚೇರಿಯಿಂದ ದಿನವೂ ತಡವಾಗಿ ಬರುವಿರಾ ?

೨. ಕಚೇರಿ ಕೆಲಸವನ್ನು ಮನೆಗೆ ತರುವಿರಾ ?

೩. ಸಂಜೆಯ ವೇಳೆ ಮಕ್ಕಳೊಡನೆ ಇರುವಾಗ ನಿಮ್ಮ ಪಾಡಿಗೆ ನೀವಿರುವಿರಾ/ ಕಾದಂಬರಿ ಓದುವಿರಾ/ ಕಚೇರಿ ಕೆಲಸ ಮಾಡುತ್ತಲಿರುವಿರಾ/ ಗೆಳೆಯರಿಗೆ ಫೋನ್ ಮಾಡುತ್ತಲಿರುವಿರಾ ?

೪. ವ್ಯವಹಾರದ ಮೇಲೆ ಆಗಾಗ್ಗೆ ಬೇರೆ ಊರುಗಳಿಗೆ ಹೋಗುವಿರಾ ?

೫. ಮನೆಯ ವ್ಯವಹಾರಗಳಿಗೆ ಸ್ವಲ್ಪವೂ ಗಮನ ಕೊಡಲಾರದಷ್ಟು ಕೆಲಸದ ಒತ್ತಡ ನಿಮಗಿದೆಯೇ ?

೬. ಆಗಾಗ್ಗೆ ಸಂಜೆಯ ಪಾನಕೂಟಗಳಿಗೆ ಹೋಗುವಿರಾ ?

೭. ರಜೆ ದಿನಗಳಲ್ಲಿ ಮಕ್ಕಳನ್ನು ಹೊರಗೆ ಕರೆದೊಯ್ಯುವಿರಾ ?

೮. ಮಗುವಿನ ಆಟ, ಪಾಠ, ಊಟಗಳಲ್ಲಿ ಭಾಗಿಯಾಗುವಿರಾ ?

೯. ಯಾವ ವಿಷಯದಲ್ಲಿ ನಿಮ್ಮ ಮಗ ದಡ್ಡ ಎಂದು ನಿಮಗೆ ತಿಳಿದಿದೆಯೆ ? ಅದಕ್ಕಾಗಿ ನೀವೇನು ಕ್ರಮ ಕೈಕೊಂಡಿದ್ದೀರಿ? ಹೋಗಲಿ ನಿಮ್ಮ ಮಗು ಎಷ್ಟನೇ ತರಗತಿಯಲ್ಲಿ ಓದುತ್ತಿರುವನೆಂದು ನಿಮಗೆ ಖಚಿತವಾಗಿ ತಿಳಿದಿದೆಯೆ ?

೧೦. ಮಕ್ಕಳ ಮುಂದೆ ಧೂಮ್ರಪಾನ/ ಮದ್ಯಪಾನ ಮಾಡುವಿರಾ? ಕಾರಣ ಸುಸ್ತು/ (Tension) ಎನ್ನುವಿರಾ ? ಇವುಗಳಿಂದ ನೆಮ್ಮದಿ/ ಆರಾಮ ದೊರೆಯುತ್ತದೆ ಎನ್ನುವಿರಾ ?

೧೧. ನಿಮ್ಮ ಮಡದಿಯನ್ನು ಮಕ್ಕಳ ಮುಂದೆ ಬೈಯುವಿರಾ/ ಹೊಡೆಯುವಿರಾ ?

೧೨. ಸಮಸ್ಯೆಗಳನ್ನು ಮಡದಿಯೊಂದಿಗೆ / ಮಕ್ಕಳೊಂದಿಗೆ ಹಂಚಿಕೊಳ್ಳುವಿರಾ ?

೧೩. "ಪಾಕೆಟ್‌ಮನಿ"ಯಲ್ಲಿ ಕಂಜೂಸ್‌ತನ / ಧಾರಾಳಿತನ ತೋರುವಿರಾ ? ಅದನ್ನು ಹೇಗೆ ಖರ್ಚು ಮಾಡಿದರೆಂದು ಕೇಳುತ್ತೀರಾ ?

೧೪. ನಿಮ್ಮನ್ನು "ಮಾದರೀ ತಂದೆ" ಎಂಬ ಅಭಿಮಾನದಿಂದ ನಿಮ್ಮ ಮಗು ನೋಡುತ್ತಾನೆಯೇ ?

**ತಾಯಿಗೆ ಪ್ರಶ್ನೆಗಳು:**

ಜನನಿ ತಾನೆ ಮೊದಲ ಗುರುವು . . . .! ಆದ್ದರಿಂದ ಆಕೆಯ ಪಾತ್ರ ಮಕ್ಕಳ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಅತ್ಯಂತ ಮುಖ್ಯವಾದದ್ದು. ಆಕೆಗೆ ಈ ಪ್ರಶ್ನೆಗಳು ಮಾರ್ಗದರ್ಶನವನ್ನು ನೀಡಬಲ್ಲವು.

೧. ನೀವು ವೃತ್ತಿ ನಿರತ ಮಹತ್ವಾಕಾಂಕ್ಷಿಯೇ ?

೨. ಮನೆಯ ಕೆಲಸಗಳನ್ನು ನೀವೇ ಮಾಡುವಿರಾ/ ಕೆಲಸಗಾರರನ್ನು ಅವಲಂಬಿಸಿರುವಿರಾ ?

೩. ಸ್ವತಃ ಅಡಿಗೆ ಮಾಡುವಿರಾ ?

೪. ನಿಮ್ಮ ಪತಿ / ಮಕ್ಕಳಿಗೆ ಸ್ವಯಂ ಊಟಕ್ಕೆ ಬಡಿಸುವಿರಾ/ ಆಳುಗಳ ವಶಕ್ಕೆ ಬಿಡುವಿರಾ ?

೫. ತಿರುಗಾಡಲು ಮಕ್ಕಳನ್ನು ನಿಮ್ಮ ಜೊತೆಗೆ ಕರೆದೊಯ್ಯುವಿರಾ / ಕೆಲಸಗಾರರ ಜೊತೆಯಲ್ಲಿ ಕಳಿಸುವಿರಾ / ಅವಶ್ಯಕತೆಯೇ ಇಲ್ಲವೆಂದು ಅವರ ಪಾಡಿಗೆ ಅವರನ್ನು ಬಿಡುವಿರಾ ?

೬. ಬೆಳೆದ ಮಕ್ಕಳಿಗೆ ಇಂತಿಷ್ಟೇ ಹೊತ್ತಿಗೆ ಮನೆಗೆ ಬರಬೇಕೆಂದು ಕಟ್ಟಪ್ಪಣೆ ಮಾಡಿರುವಿರಾ ?

೭. 'Home-work' ಗಮನಿಸುವಿರಾ ?

೮. ಅವರ ಶುಚಿತ್ವ/ ಆರೋಗ್ಯಕ್ಕೆ ಗಮನ ನೀಡುವಿರಾ ?

೯. ಮಕ್ಕಳಿಗೆ ಕಥೆಗಳನ್ನು ಹೇಳುವಿರಾ ?

೧೦. ಶಾಲೆಗೆ ಹೋಗಿ ಮಕ್ಕಳ ಬಗ್ಗೆ ವಿಚಾರಿಸುವಿರಾ ?

೧೧. ಮಕ್ಕಳು ಮನೆಯಲ್ಲಿರಬೇಕಾದರೆ ಗೆಳತಿಯರ ಜೊತೆಯಲ್ಲಿ ಹರಟೆ ಹೊಡೆಯುವಿರಾ ಅಥವಾ ಕ್ಲಬ್‌ಗೆ ಹೋಗಿ ಇಸ್ಪೀಟ್ ಆಡುವಿರಾ ?

೧೨. ನಿಮ್ಮ ಮಕ್ಕಳ ಗೆಳೆಯರು ಯಾರು? ಎಂಥವರು ಎಂಬುದು ನಿಮಗೆ ಗೊತ್ತೆ ?

೧೩. ಮಕ್ಕಳ ಮುಂದೆ ಸಣ್ಣಪುಟ್ಟ ಕಾರಣಗಳಿಗೆ ನಿಮ್ಮ ಪತಿಯೊಂದಿಗೆ ಜಗಳವಾಡುವಿರಾ ?

೧೪. ನಿಮ್ಮ ಪತಿ ಊರಲ್ಲಿಲ್ಲದಾಗ ಮನೆಯ ಕೆಲಸಗಳನ್ನು ಒಟ್ಟಾರೆ ಧೈರ್ಯದಿಂದ ಸಮರ್ಥನೀಯವಾಗಿ ನಿಭಾಯಿಸುವಿರಾ ?

೧೫. ನಿಮ್ಮ ಪತಿಯ ಬೆನ್ನ ಹಿಂದೆ ಟೀಕೆ, ಅದೂ ಮಕ್ಕಳ ಮುಂದೆ ಮಾಡುವಿರಾ ?

೧೬. ಎಲ್ಲ ಮಕ್ಕಳನ್ನು ಸಮನಾಗಿ ಪ್ರೀತಿಸುವಿರಾ ? ಯಾರನ್ನಾದರೂ ಹೆಚ್ಚಿಗೆ ಮುದ್ದು ಮಾಡುತ್ತೀರಾ ?

ಮುಖ್ಯ. ಏಕೆಂದರೆ ಈ ವಿಷಯದಲ್ಲಿ ನಿಮಗಿಂತಲೂ ನಿಮ್ಮ ಮಗನಿಗೇ ಅನುಭವ ಹೆಚ್ಚು. ಆದ್ದರಿಂದ ಅವನನ್ನು ನಿಯಂತ್ರಿಸಲು ನೀವು ಈ ಸಿದ್ಧತೆಯನ್ನು ಮಾಡಿಕೊಳ್ಳಬೇಕು.

ಎರಡನೆಯದಾಗಿ ನಿಮ್ಮ ಮಗ ದುರ್ವ್ಯಸನದ ಹಾದಿಯಲ್ಲಿ ಯಾವ ಹಂತವನ್ನು ತಲುಪಿದ್ದಾನೆ ಎಂದು ತಿಳಿಯುವುದು ಮುಖ್ಯ. ಈ ವಿವಿಧ ಹಂತಗಳು ಈ ರೀತಿ ಇರಲು ಸಾಧ್ಯ.

೧. ಇತರರು ಮಾದಕ ವಸ್ತುಗಳನ್ನು ಸೇವಿಸುವುದನ್ನು ನೋಡಿ ನಿಮ್ಮ ಮಗನೂ ಆರಂಭಿಸಿರಬಹುದು – ಈ ಹಂತದಲ್ಲಿ ನಿಯಂತ್ರಣ ಸುಲಭ.

೨. 'ಕಿಕ್' ಗೋಸ್ಕರ ಸೇವಿಸುತ್ತಿದ್ದರೆ, ಮುಂದೆ ಅದರಿಂದಾಗುವ ದುಷ್ಪರಿಣಾಮಗಳ ಬಗೆಗೆ ಮನಮುಟ್ಟುವಂತೆ ವಿವರಿಸಿದಾಗ, ಅವನು ಹೆದರಿ ಹಿಂದಕ್ಕೆ ಬರಬಹುದು.

೩. ಅವನಿಗೆ ಯಾವುದಾದರೂ ಭಾವನಾತ್ಮಕ ಸಮಸ್ಯೆಗಳಿದ್ದರೆ – ಉದಾ: ಏಕಾಕಿತನ, ಕೀಳರಿಮೆ, ಭಗ್ನಪ್ರಣಯ, ಲೈಂಗಿಕ ಸಮಸ್ಯೆ ಇತ್ಯಾದಿ ಇದ್ದು ಅದರಿಂದ ಹೊರಬರಲು ಸಾಧ್ಯವಾಗದೆ ತೊಳಲಿ, ಪರಿಹಾರಕ್ಕೆ ಮಾದಕವಸ್ತುಗಳನ್ನು ಸೇವಿಸುತ್ತಿದ್ದರೆ ಅದನ್ನು ತಿಳಿದು ನಿವಾರಿಸಬೇಕು. ತಮ್ಮ ಪ್ರೀತಿ ಮತ್ತು ಸಹಕಾರದಿಂದ ಅವನನ್ನು ಹಾದಿಗೆ ತರಬಹುದು.

೪. ಆರ್ಥಿಕ ಸಮಸ್ಯೆಯಿಂದ ಅವನು ವ್ಯಸನಿಯಾಗಿದ್ದರೆ, ಅವನನ್ನು ರಕ್ಷಿಸಬೇಕಾದವರಲ್ಲಿ ಸಮಾಜ ಮತ್ತು ಸರ್ಕಾರದ ಪಾತ್ರ ಬಹಳ ಮುಖ್ಯ.

೫. ಕೆಲವರಿಗೆ ವ್ಯಕ್ತಿತ್ವದ ವಿಕಾಸದಲ್ಲಿಯೇ ಮೂಲಭೂತ ದೋಷವಿದ್ದು ಅವರು ವ್ಯಸನಿಗಳಾಗಿರಬಹುದು. ಇಂತವರನ್ನು ತಜ್ಞರು ಮಾತ್ರ ಗುರುತಿಸಿ ವಾಸಿ ಮಾಡಬಲ್ಲರು.

## ಮನಸ್ಸಿದ್ದರೆ ಮಾತ್ರ ಮಾರ್ಗ

ಸ್ವಭಾವತಃ ಯಾರೂ ವ್ಯಸನಿಗಳಲ್ಲ. ಅವರು ಪರಿಸ್ಥಿತಿಯ ಕೈಗೊಂಬೆಯಾಗಿರುವುದು ಸಹಜ. ಕಾರಣ, ದುರ್ವ್ಯಸನದ ನರಕಕ್ಕೆ ಇರುವ ಬಾಗಿಲುಗಳಿಗೆ ಬಲವಾದ ಬೀಗಗಳು ಇಲ್ಲದಿರುವುದು. ಈ ಬೀಗಗಳು ಮತ್ತಾರು ಅಲ್ಲ, ಪೋಷಕರು ಮತ್ತು ಬೋರ್ಡಿಂಗ್ ಶಾಲೆಯ ಅಧ್ಯಾಪಕರು. ಆದರೆ ಮಹಾಬೀಗವಾಗಬೇಕಾದದ್ದು ಸ್ವಯಂ ವಿದ್ಯಾರ್ಥಿಯೇ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಮೊದಲ ಎರಡು ಬೀಗಗಳು ಬಲವಾಗಿರದಿದ್ದರೆ ಮೂರನೆಯದು ಸಹಜವಾಗಿರಲು ಅಸಾಧ್ಯ.

ಈ ಎಲ್ಲ ಸಮಸ್ಯೆಗಳಿಗೆ ಏಕೈಕ ಉತ್ತರ ತಡೆಗಟ್ಟುವಿಕೆ. "ಪ್ರಕ್ಷಾಲನಾತ್ ಹಿ ಪಂಕಸ್ಯ ದೂರಾದಸ್ಪರ್ಶನಂ ವರಂ." ಜಗದ ಜಂಜಾಟದ ಬದುಕಿನಲ್ಲಿ ಜರ್ಜಿತರಾಗಿ ಮಾದಕವಸ್ತುಗಳ ದಾಳಿಯ ಗಾಳಕ್ಕೆ ಸಿಕ್ಕಿಕೊಳ್ಳಬಾರದು. "ಕೆಲಸದಲ್ಲಿಯ ಬದಲಾವಣೆಯಿಂದ ಬೇಸರ ಕಳೆಯಲು ಸಾಧ್ಯ" ಎಂಬ

ಹಿರಿಯರ ಹೇಳಿಕೆ ನಮಗೆ ಆಸ್ತಿಯಾಗಬೇಕು. ಮಾದಕವಸ್ತುಗಳ ದಾಸರಾಗಬಾರದು.

ಬೇಸರ ಮಾದಕ ಔಷಧಿ ಸೇವನೆ ಖುಷಿ
ಬೇಸರದಲ್ಲಿ ಬಂಧನಗೊಳ್ಳುವುದು.



ಕ್ಷಣಿಕ ಸುಖಕ್ಕೆ ಬಾಳು ಹಾಳು ಮಾಡಿಕೊಳ್ಳಬಾರದು. ಮಾನವನಾಗಿ ಹುಟ್ಟಿದ ಮೇಲೆ ಏನನ್ನಾದರೂ ಸಾಧಿಸಲೇಬೇಕು. ಸಾಧನೆ ಸರಳವಲ್ಲ ನಿಜ. ಆ ದಿಶೆಯಲ್ಲಿಯ ಪ್ರಯತ್ನದಿಂದ

ಬೇಸರ ರಚನಾತ್ಮಕ ಚಟುವಟಿಕೆ

ವ್ಯಕ್ತಿತ್ವ ವಿಕಾಸ

ಅಸಾಧ್ಯವೇನಲ್ಲ ಎಂಬುದು ಸತ್ಯ. ಕಾರಣ ಮಾದಕವಸ್ತುಗಳ ಸೇವನೆ ತೊಡೆದು ಬೇಸರವಾದಾಗ, ಅದರಿಂದ ಮುಕ್ತರಾಗಲು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಬೇಕು. ಇದರಿಂದ ಅಸ್ತಿತ್ವ ಗಟ್ಟಿಗೊಳ್ಳುವುದು. ವ್ಯಕ್ತಿತ್ವ ವಿಕಾಸಗೊಳ್ಳುವುದು.

ಮಕ್ಕಳು ಹದಿಹರೆಯಕ್ಕೆ ಕಾಲಿಟ್ಟು ದುರ್ವ್ಯಸನಗಳ ಪರಿಚಯವನ್ನು ವಾಮಮಾರ್ಗದಲ್ಲಿ ಪಡೆಯುವುದಕ್ಕೆ ಮೊದಲು ತಾವೇ ಧೂಮ್ರಪಾನ, ಮದ್ಯಪಾನ, ಮಾದಕವಸ್ತುಗಳ ದುರುಪಯೋಗ, ಜೂಜು, ಲೈಂಗಿಕತೆ, ಲೈಂಗಿಕ ರೋಗಗಳು ಮುಂತಾದವುಗಳ ಸಾಧಕ ಬಾಧಕಗಳ ಪರಿಚಯ ಮಾಡಿಕೊಡುವುದು ಒಳ್ಳೆಯದು. ಅವರು ಕೇಳುವ ಪ್ರಶ್ನೆಗಳಿಗೆ ಪ್ರಾಮಾಣಿಕವಾಗಿ ಉತ್ತರಿಸಬೇಕು. ಸಂಪೂರ್ಣ ಮಾಹಿತಿಯನ್ನು ನೀಡಬೇಕು. ಅದಕ್ಕಾಗಿ ತಂದೆತಾಯಿಯರು ಈ ಬಗ್ಗೆ ನಿಖರವಾಗಿ ತಿಳಿದುಕೊಂಡಿರಬೇಕು. ನುಡಿದಂತೆ ನಡೆದು ತೋರಿಸಬೇಕು. ಆಗ ಮಾತ್ರ ಮಕ್ಕಳಿಗೆ ಮಾದರೀ ತಂದೆತಾಯಿಗಳಾಗಿರಲು ಸಾಧ್ಯ. ಹದಿಹರೆಯಕ್ಕೆ ಕಾಲಿಡುತ್ತಿರುವಂತೆ ಯುವ ಮನಸ್ಸು ಎಲ್ಲಾ ಕಡೆ ಹರಿದಾಡುವುದು ಸಹಜ. ಆದ್ದರಿಂದ ಅವರ ಜೀವನದ ಗುರಿಯನ್ನು ರೂಪಿಸಬೇಕು. ಆರೋಗ್ಯಕರ ಹವ್ಯಾಸಗಳನ್ನು ಅವರಿಗೆ ಕಲಿಸಿ, ಅದರಲ್ಲಿ ತಾವೂ ಪ್ರತ್ಯಕ್ಷ ಭಾಗವಹಿಸಿ ಪ್ರೋತ್ಸಾಹಿಸಬೇಕು.

ಒಮ್ಮೆ ಮತ್ತಿನ ಔಷಧಿಗಳ ರುಚಿ ರಚಿಸಿದ ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡರೆ ಸಾವೇ ಮುಕ್ತಿಯ ಮಾರ್ಗ ಎಂಬುದರಲ್ಲಿ ಸತ್ಯಾಂಶ ಇಲ್ಲದಿಲ್ಲ. ಈ ಚಕ್ರವ್ಯೂಹ ಭೇದಿಸಿ ಹೊರಗೆ ಬರಲು ಮನೋನಿರ್ಧಾರ ಅತ್ಯಗತ್ಯ. ಮನಸ್ಸಿದ್ದಲ್ಲಿ ಮಾರ್ಗವಿದೆ. ಹಿಂದೆಗೆತದ ಚಿನ್ಹೆ (Withdrawal Symptom)ಗಳನ್ನು ಸಂಯಮ ಹಾಗೂ ತಾಳ್ಮೆಯಿಂದ ತೆಗೆದುಕೊಳ್ಳುವ ದೃಢಸಂಕಲ್ಪ ಬೇಕು. ಚಿಕಿತ್ಸೆ ಎಷ್ಟರ ಮಟ್ಟಿಗೆ ಯಶಸ್ವಿಯಾದೀತು ಅನ್ನುವುದು –

೧. ರೋಗಿ ಯಾವ ಹಂತದಲ್ಲಿ ಚಿಕಿತ್ಸೆಗೆ ಬರುತ್ತಾನೆ.

೨. ಚಟ ಬಿಡಲು ಪ್ರಾಮಾಣಿಕ ಪ್ರಯತ್ನ ಮತ್ತು ಆಸೆ ಎಷ್ಟಿದೆ?

೩. ರೋಗಿಯ ಸಂಬಂಧಿಕರು, ಮಿತ್ರರು ಎಷ್ಟು ಸಹಾಯ, ಸಹಾನುಭೂತಿ ತೋರಿ ಚಿಕಿತ್ಸೆಯಲ್ಲಿ ಭಾಗವಹಿಸಬಲ್ಲರು.

೪. ಲಭ್ಯವಿರುವ ಚಿಕಿತ್ಸಾ ಸೌಲಭ್ಯಗಳು.

೫. ಪರಿಸರ ಎಷ್ಟು ಅನುಕೂಲಕರ ಹಾಗೂ ಆರೋಗ್ಯಕರ ವಾಗಿದೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ.

ತಜ್ಞ ವೈದ್ಯರು ಸಾಮಾನ್ಯವಾಗಿ ಅಳವಡಿಸುವ ಚಿಕಿತ್ಸಾ ವಿಧಾನ –

೧. ವೈದ್ಯರ ಉಸ್ತುವಾರಿಯಲ್ಲಿ ವ್ಯಕ್ತಿ ತೆಗೆದುಕೊಳ್ಳುತ್ತಿರುವ ವಸ್ತುವನ್ನು ಕ್ರಮವಾಗಿ ಅಥವಾ ತತ್‌ಕ್ಷಣ ನಿಲ್ಲಿಸಿ ಬಿಡುವುದು.

೨. ಬದಲೀ ಚಿಕಿತ್ಸೆ

೩. ಆಹಾರಾಂಶಗಳ ಕೊರತೆಯನ್ನು ನಿವಾರಿಸುವುದು.

೪. ಮಾನಸಿಕ ಚಿಕಿತ್ಸೆ ಮತ್ತು ಔದ್ಯೋಗಿಕ ಪುನರ್ವಸತಿ

೫. ಸಾಮಾಜಿಕ ಪುನರ್ವಸತಿ ಯೋಜನೆಗಳು . . . . ಒಳಗೊಂಡಿರುತ್ತವೆ.

ಈ ಚಿಕಿತ್ಸೆ ಕೆಲವು ತಿಂಗಳುಗಳಿಂದ ವರ್ಷಗಳವರೆಗೆ ನಡೆಯುಬಹುದು. ಆದರೆ, ಚಿಕಿತ್ಸೆಯ ಕಾಲಪೂರ್ತಿ ಎಚ್ಚರವಾಗಿರುವುದು ಅತ್ಯವಶ್ಯ. ಇಲ್ಲದ್ದಿದ್ದಲ್ಲಿ ಮತ್ತೆ ಅವನು ದುರ್ವ್ಯಸನಿಯಾಗುವ ಸಾಧ್ಯತೆ ಹೆಚ್ಚು. ದುರ್ವ್ಯಸನದಿಂದ ಬಿಡುಗಡೆಯಾಗುವುದಕ್ಕಿಂತ ಮುಖ್ಯ, ಆ ಸ್ಥಿತಿಗೆ ತಂದ ಕಾರಣವನ್ನು ಬೇರು ಸಹಿತ ಕಿತ್ತೆಸೆಯಬೇಕು.

ದುರ್ವ್ಯಸನಿಗೆ ತಾನು ನಿಷ್ಪ್ರಯೋಜಕ, ಈ ಸಮಾಜಕ್ಕೊಂದು ಭಾರ, ತನ್ನಿಂದೇನು ಆಗದು, ತನ್ನನ್ನು ಯಾರೂ ಪ್ರೀತಿಸರು ಎಂಬ ಕೀಳರಿಮೆ ಕಾಡುವುದರಿಂದ ಇವೆಲ್ಲವನ್ನು ನಿವಾರಿಸಿ ಸಾಮಾಜಿಕವಾಗಿ ಮರಳಿ ಸ್ಥಾನ ದೊರೆಯುವಂತೆ ಮಾಡಬೇಕು. ಎಲ್ಲಕ್ಕಿಂತಲೂ ಮುಖ್ಯ, ಅವನ ಅಪರಾಧಿ ಮನೋಭಾವ ಮರಕಳಿಸದಂತೆ ನೋಡಿಕೊಳ್ಳಬೇಕು.

ಮಂಗಳನ ಅಂಗಳದಲ್ಲಿ ಮನೆ ಕಟ್ಟುವಷ್ಟು ವಿಜ್ಞಾನ ಮುಂದುವರೆದಿದ್ದರೂ, ಮಾದಕ ಔಷಧಿಗಳ ಮಾಯಾಜಾಲದ ಮೃತ್ಯುಪಂಜರದಲ್ಲಿ ತತ್ತರಿಸುವವರನ್ನು ತೋಳತೆಕ್ಕೆಯಲ್ಲಿ ಎತ್ತಿಕೊಳ್ಳುವ ಪರಿಣಾಮಕಾರಿ ಪರಿಹಾರ ಕಂಡು ಹಿಡಿಯುವಲ್ಲಿ ಆಧುನಿಕ ವೈದ್ಯಕೀಯ ವಿಜ್ಞಾನ ಅಷ್ಟೊಂದು ಯಶಸ್ವಿ ಸಾಧಿಸಿಲ್ಲ. ಭಾರತೀಯ ವೈದ್ಯಕೀಯ ಪದ್ಧತಿಯಲ್ಲಿ ಈ ಸಮಸ್ಯೆಗೆ ಪರಿಹಾರವಿದೆ ಎಂದು ಹೇಳಲಾಗುತ್ತಿದೆ. ಮಾದಕ ಔಷಧಿಗಳ ಚಟಕ್ಕೆ ಬಲಿಯಾದವರು ಮತ್ತೆ ಮೊದಲಿನಂತಾಗಲು ಯೋಗವನ್ನು ಅನುಷ್ಠಾನಕ್ಕೆ ತರುವುದೊಂದೇ ಪರಿಣಾಮಕಾರಿ

ಪರಿಹಾರ ಎಂಬುದು ಭಾರತೀಯ ವೈದ್ಯಕೀಯ ಪದ್ಧತಿಯ ಬೆಂಬಲಿಗರ ಪ್ರಬಲ ನಂಬಿಕೆ. ಶೀರ್ಷಾಸನ, ಮಯೂರಾಸನ, ಪ್ರಾಣಾಯಾಮ ಮೊದಲಾದ ಯೋಗಾಸನಗಳು 'ಅಮಲಿನ ಮೆದುಳಿಗೆ' ನೈಸರ್ಗಿಕ ಚಿಕಿತ್ಸೆ ಒದಗಿಸುತ್ತವೆ. ಕೆಲವು ಗಿಡಮೂಲಿಕೆ ಔಷಧಿಗಳನ್ನು ನೀಡಿ, ಮತ್ತಿನ ಔಷಧಿಗಳಿಗೆ ಬಲಿಯಾದವರಿಗೆ ಹೊಸ ಬದುಕು ನೀಡಲಾಗಿದೆ ಎಂದು ಆಯುರ್ವೇದ ಪಂಡಿತರು ವಾದಿಸುತ್ತಾರೆ. ಯೋಗ ಹಾಗೂ ಆಯುರ್ವೇದದ ಮೂಲಕ 'ಅಮಲು ಬಿಡಿಸಲು' ಸಾಧ್ಯವಾಗುವಂತಿದ್ದರೆ ಅದಕ್ಕಿಂತ 'ಉತ್ಕೃಷ್ಟಕರ' ಮತ್ತೊಂದು ಇರಲಾರದು. ಈ ದಿಶೆಯಲ್ಲಿ ಸಂಶೋಧನೆ ಅಗತ್ಯ.

ಸಂಶೋಧನೆ ಫಲಪ್ರದವಾದರೆ, ಲಕ್ಷಾಂತರ ಜನರ ಬದುಕಿನಲ್ಲಿ ಹೊಸ ಆಸೆಯ ಚಿಗುರು ಮೊಳಕೆಯೊಡೆಯ ಬಹುದು. ಅವರ ಬದುಕಿನ ಅಂಗಳದಲ್ಲಿ ಖುಷಿಯ ಬೆಳದಿಂಗಳು ಚೆಲ್ಲಬಹುದು. ತಮ್ಮ ಮಕ್ಕಳ ದುರ್ಗತಿಯ ಬಗ್ಗೆ ಕಣ್ಣೀರು ಸುರಿಸುವ ಲಕ್ಷಾಂತರ ತಾಯಿ ತಂದೆಗಳ ಕಣ್ಣಲ್ಲಿ ಪ್ರೀತಿಯ ಹಾಗೂ ಸಂತೋಷದ ಮಿಂಚು ಮಿಂಚಬಹುದು.

ವ್ಯಸನಿಗಳು ಈಗಲಾದರೂ ಕಣ್ಣು ತೆರೆಯಬೇಕು. ವಿವೇಕಿಗಳಾಗಿ ತಾವು ಅವುಗಳಿಂದ ದೂರವಾಗುವುದರೊಂದಿಗೆ ಇತರರೂ ಅವುಗಳ ಹತ್ತಿರ ಸುಳಿಯದಂತೆ ಕಾಳಜಿವಹಿಸಬೇಕು. ಆಗ ಮುಂದಿನ ಪೀಳಿಗೆ ನೆಮ್ಮದಿಯ ನಿಟ್ಟುಸಿರಿಡಲು ಸಾಧ್ಯ.

ಅಡಗ ತಿಂಬರು ಕಣಕದಡಿಗೆ ಇರಲ್ಕೆ
ಸುರೆಯ ಕುಡಿವರು ಹಾಲಿರಲ್ಕೆ
ಮುಕ್ಕುವರು ಭಂಗಿಯ ಸಕ್ಕರೆ ಇರಲ್ಕೆ
ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗಳುರುವರು
ಸತ್ತ ನಾಯ ಭಕ್ಷಿಸುವ ಹಡಕಿಗರನೇನಂಬೆನಯ್ಯ
ರಾಮನಾಥ

## ಬೆದರುಗೊಂಬೆ

ಪ್ರಪಂಚದ ಯಾವ ದೇಶವೂ ಮಾದಕ ವಸ್ತುಗಳ ಹಾವಳಿಯಿಂದ ಮುಕ್ತವಾಗಿಲ್ಲ. ಅಮೇರಿಕವೊಂದರಲ್ಲಿಯೇ ೧೧–೨೦ ಮಿಲಿಯನ್ ಮಾದಕ ವಸ್ತುಗಳ ವ್ಯಸನಿಗಳು ತುಂಬಿದ್ದಾರೆ. ಜಾಗತಿಕ ಆರೋಗ್ಯ ಸಂಸ್ಥೆಯ ಇತ್ತೀಚಿನ ಸಮೀಕ್ಷೆಯ ಪ್ರಕಾರ ಪ್ರಪಂಚದಲ್ಲಿ ಇಂದು ೪೫ ಮಿಲಿಯನ್ ವ್ಯಸನಿಗಳಿದ್ದಾರೆ. ಇಷ್ಟಾದರೂ ಇದು ಮಂಜುಗಡ್ಡೆಯ ಮೇಲ್ನೋಟ ಮಾತ್ರ, ಭಾರತವೂ ಇದಕ್ಕೆ ಹೊರತಾಗಿಲ್ಲ. ಒಂದು ವರದಿಯಂತೆ ದೆಹಲಿಯಲ್ಲಿ ಈಗಾಗಲೇ ೧,೧೦,೦೦೦ ಮಂದಿ ಹೆರಾಯಿನ್ ವ್ಯಸನಿಗಳಿದ್ದಾರೆ. ಇತ್ತೀಚಿನ ಸಮೀಕ್ಷೆ ಬಿಡುಗಡೆ ಮಾಡಿದ ಅಂಕಿಸಂಖ್ಯೆಗಳು ಗಂಡೆದೆಯ ಗುಂಡಿಗೆಗಳನ್ನು ಗಡಗಡ ನಡುಗಿಸುತ್ತವೆ. ಯುವಕರಲ್ಲಿ ಇದರ ಹಾವಳಿ ಹೆಚ್ಚಿ ಭಯ, ಭೀತಿ ಹುಟ್ಟಿಸಿದ ಇದು ಕರಾಳ ಭವಿಷ್ಯದ ಸೂಚಕ. ( ಕೋಷ್ಟಕ ೩ ಮತ್ತು ೪).

## ಕೋಷ್ಟಕ ೩

ಭಾರತದ ವಿವಿಧ ಪಟ್ಟಣಗಳಲ್ಲಿ ವಿದ್ಯಾರ್ಥಿ ವ್ಯಸನಿಗಳ ಪ್ರಮಾಣ

| ಪಟ್ಟಣದ ಹೆಸರು | ಮಾದಕ ವಸ್ತುಗಳ ವ್ಯಸನಿಗಳು % |
|---|---|
| ಆಗ್ರಾ | ೫೬.೨ |
| ಕಲ್ಕತ್ತಾ | ೩೭.೪ |
| ಪಂಜಾಬ್ | ೨೯.೬ |
| ಲಕ್ನೋ | ೨೫.೦ |
| ಚಂಡೀಘರ್ | ೧೮.೯ |
| ದಿಲ್ಲಿ | ೧೮.೬ |
| ಕರ್ನಾಟಕ | ೧೨.೬ |

## ಕೋಷ್ಟಕ ೪

ವಿವಿಧ ಧರ್ಮಗಳಿಗೆ ಸೇರಿದ ಯುವಕರಲ್ಲಿ ಮಾದಕ ವಸ್ತುಗಳ ಹಾವಳಿ ಪ್ರಮಾಣ.

| ವಿವಿಧ ಧರ್ಮಗಳು | ವ್ಯಸನಿಗಳು % |
|---|---|
| ಸಿಖ್ಖರು | ೩೦.೮ |
| ಕ್ರೈಸ್ತರು | ೨೩.೯ |
| ಬೌದ್ಧರು | ೨೨.೩ |
| ಹಿಂದು | ೧೧.೭ |
| ಮುಸ್ಲಿಮ್ | ೯.೦ |
| ಜೈನರು | ೦.೨ |

ಮತ್ತಿನ ವಸ್ತುವಿನ ಸಾಂಕ್ರಾಮಿಕ ಹಾವಳಿ ಭಾರತದಲ್ಲೂ ದಿನದಿಂದ ದಿನಕ್ಕೆ ಹೆಚ್ಚುತ್ತಲಿದೆ. ಪಶ್ಚಿಮಕ್ಕೆ ಹೊಳೆಯುವ ಅರ್ಧಚಂದ್ರನಂತೆ ಸುತ್ತುವರಿದ ಪಾಕಿಸ್ತಾನ ಅಪಘಾನಿಸ್ತಾನ ಮತ್ತು ಇರಾನ, ಪೂರ್ವಕ್ಕೆ 'ಗೋಲ್ಡನ್ ಡ್ರೈಂಗಾಲ್' ಎಂದೇ ಪ್ರಖ್ಯಾತವಾಗಿರುವ ಬರ್ಮಾ, ಥೈಲ್ಯಾಂಡ ಮತ್ತು ಲೋಯಸ್‌ಗಳಿಂದ ಸುತ್ತುವರಿದ ಭಾರತಕ್ಕೆ ಎಗ್ಗಿಲ್ಲದೆ ಮಾದಕ ವಸ್ತುಗಳು ನುಗ್ಗುತ್ತಿವೆ. ಭಾರತವನ್ನು ಸುತ್ತುವರಿದ ದೇಶಗಳಲ್ಲಿ ಅನೇಕ ನಿರ್ಬಂಧಗಳು ಏರ್ಪಟ್ಟಿರುವುದರಿಂದ, ಭಾರತವೇ ಈಗ ಅಂತಾರಾಷ್ಟ್ರೀಯ ಮಾದಕ ವಸ್ತುಗಳ ಮಾರುಕಟ್ಟೆಯಾಗಿದೆ. ಮಾದಕ ವಸ್ತುಗಳ ಈ ಪಿಡುಗನ್ನು ತಡೆಗಟ್ಟಲು ಸರ್ಕಾರ ಕಟ್ಟುನಿಟ್ಟಾಗಿ ಕ್ರಮ ಕೈಕೊಳ್ಳಲು ಸಾಧ್ಯವಿದೆ. ಮಾದಕ ಔಷಧಿಗಳ ತಯಾರಿಕೆ, ಸಾಗಾಣಿಕೆ, ಮಾರಾಟ ಹಾಗೂ ಉಪಯೋಗದ ಮೇಲೆ ನಿರ್ಬಂಧಗಳನ್ನು ಹೇರುವುದರಿಂದ ಆ ನಿಟ್ಟಿನಲ್ಲಿ ದಿಟ್ಟ ಹೆಜ್ಜೆ ಇಡಲು ಸಾಧ್ಯವಾದೀತು. ಈ ಎಲ್ಲ ಅಂಶಗಳನ್ನೊಳಗೊಂಡ ಕಾಯ್ದೆ, ಈ ದೇಶದ ಸೂತ್ರಧಾರರಿಂದ ೧೯೫೧ರಲ್ಲಿಯೇ ರಚಿತವಾಗಿ, ಮಂಡನೆಯಾಗಿ, ಅಂಗೀಕಾರವಾಗಿ, ಕಾಯ್ದೆ ಕಾನೂನು ಪುಸ್ತಕಗಳಲ್ಲಿ ಅಚ್ಚಾಗಿ ಉಳಿದಿದೆ. (Dangerous Drug Act 1951 and Statutary Rules and Orders).

ಕಾಯ್ದೆ ಕಾನೂನಿನ ಕ್ರಮಗಳನ್ನು ಬಿಗಿಗೊಳಿಸುವ ದೃಷ್ಟಿಯಿಂದ 'Enactment of Narcatic Drugs & Psychotropic substances Act, 1985'ನ್ನು ಜಾರಿಯಲ್ಲಿ

9

ತಂದಿತು. ಇದು ೧೪ನೇ ನವ್ಹೆಂಬರ ೧೯೮೫ರಿಂದಲೇ ಆಚರಣೆಯಲ್ಲಿದೆ. ಈ ಕಾಯ್ದೆಯ ಪ್ರಕಾರ ಮತ್ತಿನ ಔಷಧಿಗೆ ಸಂಬಂಧಿಸಿದ ಅಪರಾಧಿಗಳಿಗೆ ೧೦ ವರ್ಷಗಳ ಕಠಿಣ ಶಿಕ್ಷೆ ಮತ್ತು ೧ ಲಕ್ಷ ರೂ.ಗಳ ದಂಡ ವಿಧಿಸಬಹುದಾಗಿದೆ. ಅಪರಾಧದ ಪ್ರಮಾಣಕ್ಕೆ ತಕ್ಕಂತೆ ೨೦ ವರ್ಷಗಳ ಕಠಿಣ ಶಿಕ್ಷೆ ಮತ್ತು ೩ ಲಕ್ಷ ರೂ.ಗಳ ದಂಡ ವಿಸ್ತರಿಸುವ ಸಾಧ್ಯತೆಗಳು ಇದರಲ್ಲಿ ಇದೆ. ೧೯೮೯ರಲ್ಲಿ ಇದಕ್ಕೆ ತಿದ್ದುಪಡಿ ತಂದಿದ್ದು ಅದರ ಪ್ರಕಾರ ಒಬ್ಬ ವ್ಯಕ್ತಿ ಎರಡನೇ ಸಲ ಈ ಅಮಲು ವಸ್ತುಗಳ ವಹಿವಾಟದಲ್ಲಿ ಅಪರಾಧಿಯಾದಲ್ಲಿ ಮರಣದಂಡನೆಯನ್ನು ವಿಧಿಸಬಹುದಾಗಿದೆ.

ಈ ಕಾಯ್ದೆ ಕಾನೂನುಗಳ ಕಣ್ಣಿಗೆ ಮಣ್ಣೆರಚಿ ತೆರೆಯಮರೆಯಲ್ಲಿ ಕೂತು ಕೈಚಾಚಿ ರಾಷ್ಟ್ರ ನಾಯಕರು ಕುಳಿತ ಖುರ್ಚಿಗಳು ಅಲ್ಲಾಡುವಂತೆ ಮಾಡುವಷ್ಟು ಬಲಿಷ್ಠರಾಗಿದ್ದಾರೆ ಮಾಫಿಯಾ ದೊರೆಗಳು. ಇವರ ಕೈಚಳಕದಿಂದ ಮಾದಕ ವಸ್ತುಗಳು ಜನಸಾಮಾನ್ಯರನ್ನು ಸುಲಭವಾಗಿ ತಲುಪುವವು. ಯುವಜನಾಂಗದ ಭವಿಷ್ಯವನ್ನು ಭ್ರೂಣದಲ್ಲಿಯೇ ಚಿವುಟಿಹಾಕುವವು. ಹೀಗಾಗಿ ಈ ದೇಶದಲ್ಲಿ ಮಾದಕ ವಸ್ತುಗಳಿಗೆ ಸಂಬಂಧಿಸಿದ ಕಾನೂನುಗಳು ಬೆದರುಗೊಂಬೆಗಳಾಗಿವೆ.

ಪುಸ್ತಕದ ಪುಟಗಳಲ್ಲಿ ಅಚ್ಚಾಗಿರುವ ಕಾನೂನುಗಳು ಕಿಚ್ಚಾಗಿ ಭಾರತೀಯರ ಚಿತ್ತಕ್ಕೆ ಚೇತನ ನೀಡಬೇಕು. ಅದನ್ನು ಅರಿತು, ಆಚರಣೆ, ಅನುಷ್ಠಾನಕ್ಕೆ ತರುವಲ್ಲಿ ಎಲ್ಲರೂ ಕೈ

ಜೋಡಿಸಬೇಕು. ನನಗೇಕೆ ಇಲ್ಲದ ಉಸಾಬರಿ ಎಂಬ ಉದಾಸೀನತೆ ಎಲ್ಲಿಯವರೆಗೆ ನಮ್ಮಲ್ಲಿ ಇರುವುದೋ ಅಲ್ಲಿಯವರೆಗೆ ನಾವು ಏನನ್ನೂ ಸಾಧಿಸಲಾಗುವುದಿಲ್ಲ. ಮಗ್ಗಲು ಮನೆಗೆ ಹತ್ತಿದ ಬೆಂಕಿಯ ಝಳದಲ್ಲಿ ಬೆಚ್ಚಗಿರಲೆತ್ನಿಸುವುದು ಪುಚ್ಚುತನ. ವೈಯಕ್ತಿಕ ಮಟ್ಟದಲ್ಲಿ ಮಾರಕ ಮಾದಕ ವಸ್ತುಗಳ ಪ್ರಜ್ಞೆ ಬೆಳೆದಾಗ ಮಾತ್ರ ನಮ್ಮನ್ನು ಕಾಡುತ್ತಿರುವ ಇವತ್ತಿನ ಸಮಸ್ಯೆಗೆ ಮುಕ್ತಿ ಸಿಕ್ಕೀತು

## ಆಲ್ಕೋಹಾಲಿಕ್ಸ್ ಅನಾನಿಮಸ್

ಮಾದಕ ವಸ್ತುಗಳ ವರ್ಜಿಸಿದವರೆಲ್ಲಾ ಒಟ್ಟಾಗಿ ಕಲೆತು ಪರಸ್ಪರ ಅನುಭವ ಹಂಚಿಕೊಳ್ಳುವ ಹಾಗೂ ಮಾದಕ ವಸ್ತುಗಳಿಂದ ದೂರವಾಗಿಯೇ ಇರಲು ಸಂಕಲ್ಪ ಮಾಡಿರುವ ಸಮಾಜದ ವಿವಿಧ ಕ್ಷೇತ್ರಗಳ ಜನರ ಒಂದು ಮೈತ್ರಿ ಸಂಘ-ಆಲ್ಕೋಹಾಲಿಕ್ಸ್ ಅನಾನಿಮಸ್ (ಎ.ಎ.) ಇದಕ್ಕೆ ಸದಸ್ಯರಾಗಲು ಹಣ ಸಂದಾಯ ಮಾಡಬೇಕಾಗಿಲ್ಲ. ಏನೂ ಕೊಡಬೇಕಾಗಿಲ್ಲ. ಮಾದಕ ವಸ್ತು ಸೇವಿಸುವುದನ್ನು ನಿಲ್ಲಿಸಲು ಅಪೇಕ್ಷೆ ಹೊಂದಿದ್ದರೆ ಸಾಕು.

ಕುಡಿತದ ಕಪಿ ಮುಷ್ಟಿಯಲ್ಲಿ ಹಿಂಡಿ ಹಿಪ್ಪೆಯಾಗಿದ್ದ ನ್ಯೂಯಾರ್ಕಿನ ಒಬ್ಬ ಷೇರುವರ್ತಕನಿಗೆ ಕುಡಿತದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಜ್ಞಾನೋದಯವಾಯಿತು. ಸಹನೆ, ಸಂಯಮಗಳಿಂದ, ಮನೋನಿರ್ಧಾರದಿಂದ ಗಂಟುಬಿದ್ದ ಕುಡಿತದ ನಂಟನ್ನು ಬಿಡಿಸಿಕೊಂಡ. ತನ್ನಂತೆ ಹಾಳಾದವರ ಬಗ್ಗೆ,

ಹಾಳಾಗುತ್ತಿರುವವರ ಬಗ್ಗೆ ಹಗಲಿರುಳು ವಿಚಾರಿಸಿದ. ಮದ್ಯದ ದಾಸ್ಯದಿಂದ ಜನರನ್ನು ಮುಕ್ತರನ್ನಾಗಿಸಲು ಮಾರ್ಗದರ್ಶನ ಮಾಡುವ, ರೋಗದಿಂದ ನರಳುವವರಿಗೆ ನೆರವು ನೀಡುವ ಸಂಸ್ಥೆ ಸ್ಥಾಪಿಸುವ ಕಲ್ಪನೆಗೆ ಕಾವು ಕೊಡಹತ್ತಿದ. ಓಹಿಯೋದ ಶಸ್ತ್ರಚಿಕಿತ್ಸಕರ ಬಳಿಯಲ್ಲಿ ತನ್ನ ಅಳಲನ್ನು ಹೇಳಿದ. ಅವರೂ ಒಪ್ಪಿದರು. ಇವರಿಬ್ಬರ ಪ್ರಯತ್ನದ ಫಲವಾಗಿ ಅಲ್ಕೋಹಾಲಿಕ್ಸ್ ಅನಾನಿಮಸ್ ಸಂಸ್ಥೆ ೧೯೩೫ರಲ್ಲಿ ಜನ್ಮತಾಳಿತು. ಈಗ ತನ್ನ ಸೇವಾ ಸೌಲಭ್ಯವನ್ನು ಮಾದಕ ವಸ್ತುಗಳ ವ್ಯಸನಿಗಳಿಗೂ ವಿಸ್ತರಿಸಿದೆ.

ನಿಸ್ವಾರ್ಥ ಸೇವೆ ಸಲ್ಲಿಸುವ ಈ ಸಂಸ್ಥೆ ಅಮೇರಿಕಾದವರನ್ನು ಆಕರ್ಷಿಸಿತು. ನಾಡಿನುದ್ದಗಲಕ್ಕೂ ಸೇವಾ ಸಂಸ್ಥೆಗಳು ತಲೆ ಎತ್ತಿ ನಿಂತವು. ಅನಂತರ ವಿಶ್ವಾದ್ಯಂತ ವ್ಯಾಪಿಸಿದವು. ಇಂದು ಸಾವಿರಾರು ಜನರನ್ನು ಪ್ರಪಾತದಿಂದ ಮೇಲೆತ್ತಿದ ಹೆಗ್ಗಳಿಕೆಯನ್ನು ಪಡೆದಿದೆ.

ಎ.ಎ. ಸಂಸ್ಥೆಯ ಸದಶ್ಯರನ್ನು ಸ್ವಾಗತಿಸುತ್ತದೆ. ಮದ್ಯ, ಮತ್ತಿನ ವಸ್ತುಗಳನ್ನು ತ್ಯಜಿಸುವುದರಿಂದ ಜೀವನ ಹೆಚ್ಚು ಸುಗಮವಾಗುವುದನ್ನು ಸದಸ್ಯರಿಗೆ ಮನವರಿಕೆ ಮಾಡಿಕೊಡುತ್ತದೆ. ಅದರಂತೆ ನಡೆಯಲು ಹಚ್ಚುತ್ತದೆ. ಅನುಗಾಲ ಅವರು ಸಂಯಮದಿಂದ ಇರುವಂತೆ ಮಾಡುತ್ತದೆ. ಇಂಥ ಸಂಸ್ಥೆಗಳು

ಭಾರತದಲ್ಲೂ ಇವೆ (ಬೆಂಗಳೂರಿನಲ್ಲಿ ಎಲ್ಲಿ ಇವೆ ಎಂಬುದಕ್ಕೆ ಬಾಕ್ಸ ನೋಡಿ).

ಅಪ್ಪಿ ತಪ್ಪಿ ಮಹಿಳೆಯರು ಕುಡಿತದ ದಾಸಿಯರಾದಲ್ಲಿ ಸಮಾಜ ಕ್ರೂರವಾಗಿ ಕಾಣುತ್ತದೆ. ಅವರನ್ನು ಬಹಿಷ್ಕರಿಸುತ್ತದೆ. ಇಂಥವರು ಅಂತರ್ಮುಖಿಗಳಾಗಿ, ಆತ್ಮಧೂಷಣೆಯ ಭಾರದಿಂದ ತತ್ತರಿಸಿ ತಿಪ್ಪರಲಾಗ ಹಾಕುತ್ತಾರೆ. ಎ.ಎ. ಸಂಸ್ಥೆಯು ಇಂಥ ಮಹಿಳೆಯರಲ್ಲೂ ಜ್ಞಾನ ಜ್ಯೋತಿಯನ್ನು ಹೊತ್ತಿಸಿ ತಪ್ಪಿನ ಪ್ರಜ್ಞೆಯನ್ನು ತೊಡೆದು ಹಾಕುವುದು. ಉಳಿದವರಂತೆ ನೆಮ್ಮದಿಯಿಂದ ಬದುಕಲು ಅವಕಾಶ ಮಾಡಿಕೊಡುವುದು. ಮಾದಕ ವಸ್ತುಗಳ ದಾಸ್ಯ ಒಂದು ರೋಗ. ಇದಕ್ಕೆ ಹೆಣ್ಣು, ಗಂಡು ಬಡವ ಬಲ್ಲಿದರೆಂಬ ಭೇದವಿಲ್ಲ. ಮೇಲು ಕೀಳಿನ ಭಾವವಿಲ್ಲ. ಈ ಕಾಯಿಲೆಗೂ ಉಳಿದ ಕಾಯಿಲೆಗಳಂತೆ ಚಿಕಿತ್ಸೆ ಹಾಗೂ ಆರೋಗ್ಯ ಶಿಕ್ಷಣದ ಅಗತ್ಯವಿದೆ. ಅಮೇರಿಕ ಮತ್ತು ಬ್ರಿಟನ್ನಿನ ವೈದ್ಯಕೀಯ ಸಂಘಗಳು ಇದನ್ನು ಕಾಯಿಲೆಯೆಂದೇ ಪರಿಗಣಿಸಿವೆ. ಆ ನಿಟ್ಟಿನಲ್ಲಿ ಚಿಕಿತ್ಸೆಯ ರೂಪ ರೇಷೆಗಳ್ನು ನಿರೂಪಿಸಿ 'ಡಿ-ಆಡಿಕ್ಷನ್' ಕೇಂದ್ರಗಳ ಮುಖಾಂತರ ಅವುಗಳನ್ನು ಕಾರ್ಯರೂಪಕ್ಕೆ ತರುತ್ತಿವೆ. ಅಲ್ಕೋಹಾಲಿಕ್ಸ್ ಅನಾನಿಮಸ್ ಸಂಸ್ಥೆಯಲ್ಲಿ ಸದಸ್ಯರು ತಮ್ಮ ಹಿಂದಿನ ಕಹಿ ಅನುಭವಗಳನ್ನು, ಸಂಕಷ್ಟಗಳನ್ನು ಪರಸ್ಪರ ಹಂಚಿಕೊಳ್ಳುತ್ತಾರೆ. ಸಮೂಹ ಚರ್ಚೆಯ ಮುಖಾಂತರ ಆತ್ಮಸ್ಥೈರ್ಯವನ್ನು ಬೆಳೆಸಿಕೊಳ್ಳುತ್ತಾರೆ. ಮಾದಕ ವಸ್ತುಗಳ ತ್ಯಜಿಸುವ ದೃಢ ಸಂಕಲ್ಪವನ್ನು ಗಟ್ಟಿಗೊಳಿಸಿಕೊಳ್ಳುತ್ತಾರೆ.

## ಎ.ಎ. ಸಭೆಗಳು

ಬೆಂಗಳೂರಿನಲ್ಲಿ ಈ ದಿನಗಳಂದು ಎ.ಎ. ಸಭೆಗಳು ನಡೆಯುತ್ತವೆ.

**ರವಿವಾರ:** ಸ್ಟ್ರೇಸಿ ಮೆಮೋರಿಯಲ್ ಸ್ಕೂಲ್,
ಸೆಂಟ್ ಮಾರ್ಕ್ಸರೋಡ

**ಸಮಯ ಬೆಳಿಗ್ಗೆ ೧೧ರಿಂದ ೧೨**

**ಮಂಗಳವಾರ ಹಾಗೂ ಶನಿವಾರ:** ರಿಚ್‌ಮಂಡ್
ರಸ್ತೆಯಲ್ಲಿನ ಕೆಥೆಡ್ರಲ್ ಹೈಸ್ಕೂಲ

**ಸಮಯ ಸಂಜೆ ೭ರಿಂದ ೮**

**ಬುಧವಾರ ಹಾಗೂ ಶುಕ್ರವಾರ:** ಸೆಂಟ್‌ಮಾರ್ಕ್ಸ್
ಕೆಥೆಡ್ರಲ್ ಸ್ಕೂಲ

**ಸಮಯ ಸಂಜೆ ೭ರಿಂದ ೮**

ಬೆಂಗಳೂರಿನಿಂದ ಹೊರಗೆ ಇರುವ ಜನರು ಈ ಮೇಲ್ಕಂಡ ವಿಳಾಸಗಳಿಗೆ ಪತ್ರ ಬರೆದು ಸಹಾಯ ಕೋರಬಹುದು. ಹೆಸರುಗಳನ್ನು ಗೌಪ್ಯವಾಗಿರಿಸಲಾಗುವುದು.

ಒಂದು ಕಾಲದಲ್ಲಿ ಊದಿದ ಮುಖ, ಕೆಂಪು ಕಣ್ಣು, ಸೊರಗಿ ಸೋತ ಶರೀರ, ಮಾನಸಿಕ ಸ್ಥಿಮಿತ ಕಳೆದುಕೊಂಡಿದ್ದ ಜನರು ಇಂದು ಎಲ್ಲರೂ ಇಷ್ಟಪಡುವ ವ್ಯಕ್ತಿಗಳಾಗಿ ಮಾರ್ಪಟ್ಟಿದ್ದಾರೆ. ಅಂದಿನ ಸಮಾಜ ಶತ್ರುಗಳು ಇಂದು ಸಭ್ಯಗ್ರಹಸ್ಥರಾಗಿದ್ದಾರೆ, ಸಂಪನ್ನರಾಗಿದ್ದಾರೆ. ಸಿಟ್ಟು ಸೆಡವುಗಳನ್ನು ಸುಟ್ಟುಹಾಕಿದ್ದಾರೆ. ಮುಕ್ತವಾಗಿ ನಗಲು ಕಲಿತಿದ್ದಾರೆ. ನಗು ಸಂಜೀವಿನಿ ಇದ್ದಂತೆ. ಕಾಯಿಲೆಗಳನ್ನು ಗುಣಪಡಿಸುವ, ಪ್ರೀತಿ ವಾತ್ಸಲ್ಯಗಳನ್ನು ಹೆಚ್ಚಿಸುವ ಮಾಂತ್ರಿಕ ಶಕ್ತಿ ಅದರಲ್ಲಿದೆ. ಎ.ಎ.ಯ ಅಗೋಚರವಾದ ಮೃದುವಾದ ಹಸ್ತಸ್ಪರ್ಶ, ಅವರಲ್ಲಿ ಸಂಯಮದ ಶಕ್ತಿಯ ಸರಬರಾಜು, ಸಂಚಾರ ಆಗುವಂತೆ ಮಾಡಿ ಸಮಾಜ ಅಪೇಕ್ಷಿಸಿದ ವ್ಯಕ್ತಿಗಳನ್ನಾಗಿ ಮಾರ್ಪಾಡು ಮಾಡುವುದು.

**ನೀವು ವ್ಯಸನಿಗಳಾಗಿದ್ದೀರಾ?**

ನೀವು ಮಾದಕ ವಸ್ತುಗಳ ವ್ಯಸನಿಗಳು ಹೌದೋ? ಅಲ್ಲವೋ? ಎಂಬುದನ್ನು ನಿರ್ಣಯಿಸಲು ನಿಮ್ಮನ್ನು ನೀವೇ ಈ ಪ್ರಶ್ನೆ ಕೇಳಿಕೊಳ್ಳಿ. ಸಾಧ್ಯವಿರುವಷ್ಟು ಪ್ರಾಮಾಣಿಕವಾಗಿ ಅವುಗಳಿಗೆ ಉತ್ತರ ಹೇಳಿ.

೧. ಮಾದಕ ವಸ್ತು ಸೇವನೆ ನಿಮ್ಮ ಗೌರವಕ್ಕೆ ಕುಂದು ತರುತ್ತಿದೆಯೆ?

೨. ನೀವು ನಾಚಿಗುಳಿ ಎಂದು ಮಾದಕವಸ್ತು ಸೇವಿಸುತ್ತೀರಾ?

೩. ಮಾದಕ ವಸ್ತುಗಳಿಂದಾಗಿ ನೀವು ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದೀರಾ?

೪. ದುರ್ವ್ಯಸನದ ಕಾರಣ ಹೊತ್ತು ಗೊತ್ತು ವ್ಯತ್ಯಾಸ ಆಗುತ್ತದೆಯೆ?

೫. ಮಾದಕ ವಸ್ತುಸೇವನೆ ನಿಮ್ಮ ಕುಟುಂಬದ ವಿಷಯದಲ್ಲಿ ನೀವು ನಿರ್ಲಕ್ಷ್ಯ ತೋರುವಂತೆ ಮಾಡುತ್ತದೆಯೇ?

೬. ದುರ್ವ್ಯಸನ ನಿಮ್ಮ ಗೃಹ ಜೀವನದಲ್ಲಿ ಅಶಾಂತಿ ಉಂಟು ಮಾಡಿದೆಯೆ?

೭. ಮಾದಕ ವಸ್ತು ಸೇವಿಸಿದ ನಂತರ ಪಶ್ಚಾತಾಪ ಭಾವ ಆವರಿಸುವುದೆ?

೮. ನಿಮ್ಮ ಮಹತ್ವಾಕಾಂಕ್ಷೆ ಮಾದಕ ವಸ್ತು ಸೇವಿಸತೊಡಗಿದಾಗಿನಿಂದ ಇಳಿಮುಖ ಆಗುತ್ತಿದೆಯೆ ?

೯. ಮಾದಕ ವಸ್ತು ಸೇವಿಸಿದಾಗ ಕೆಳಮಟ್ಟದ ಸಂಗಾತಿಗಳು ಹಾಗೂ ಕೀಳು ಮಟ್ಟದ ಪರಿಸರಕ್ಕೆ ಮೊರೆಹೋಗುವಿರಾ ?

ನೀವು ಇವುಗಳಲ್ಲಿ ಯಾವುದೇ ಒಂದು ಪ್ರಶ್ನೆಗೆ 'ಹೌದು' ಎಂದು ಉತ್ತರಿಸಿದರೆ, ಅದು ನೀವು ಆಗಲೆ ಮಾದಕ ವಸ್ತುಗಳ ದಾಸರಾಗಿರಬಹುದು ಎಂಬುದಕ್ಕೆ ಸ್ಪಷ್ಟ ಎಚ್ಚರಿಕೆ.

ಒಂದು ವೇಳೆ ಯಾವುದೇ ಎರಡಕ್ಕೆ 'ಹೌದು' ಎಂದು ಉತ್ತರ ಬಂದರೆ, ಮಾದಕ ವಸ್ತುಗಳ ದಾಸಾನುದಾಸರಾಗಿರುವ ಸಾಧ್ಯತೆ ಇದೆ.

ಮೂರು ಅಥವಾ ನಾಲ್ಕು ಪ್ರಶ್ನೆಗಳಿಗೆ 'ಹೌದು' ಎಂದು ಉತ್ತರಿಸಿದರೆ, ನೀವು ಖಂಡಿತವಾಗಿಯೂ ಮಾದಕ ವಸ್ತುಗಳ ದಾಸರು.

ಈ ಪ್ರಶ್ನಾವಳಿಗಳ ಪಟ್ಟಿಯನ್ನು ಬಾಲ್ಟಿಮೋರ್‌ದ ಜಾನ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದ ಆಸ್ಪತ್ರೆ ಸಿದ್ಧಪಡಿಸಿ, ಒರೆಗಚ್ಚಿ ಉತ್ತಮ ಪರಿಣಾಮಗಳನ್ನು ಕಂಡುಕೊಂಡಿದೆ.

'ಡಿ ಆಡಿಕ್ಶನ್ ಕೇಂದ್ರ'ದಲ್ಲಿ ಕಟ್ಟುನಿಟ್ಟಿನ ಚಿಕಿತ್ಸೆ, ಆರೈಕೆ, ಆರೋಗ್ಯಕರ ಆರೋಗ್ಯ ಶಿಕ್ಷಣ, ಸಮೂಹ ಮಾಧ್ಯಮಗಳ ಮೋಡಿಗಳು ವ್ಯಸನಿಗಳನ್ನು ಮೃತ್ಯುಪಂಜರದಿಂದ ಮೇಲೆ ಎತ್ತಲು ಸಹಾಯ ಮಾಡುವವು. ಇವುಗಳ ಪ್ರಭಾವಗಳು ಚಿತ್ತದಲ್ಲಿ ಅಚ್ಚೊತ್ತಿದಂತೆ ನಿಚ್ಚಳವಾಗಿ ನಿರಂತರ ನಿಲ್ಲಬೇಕಾದರೆ ಪೂರಕವಾದ, ಪೋಷಕವಾದ, ಪರಿಪೂರಕವಾದ ಆರೋಗ್ಯಕರ, ಅನುಕೂಲಕರ ಪರಿಸರ ಅತ್ಯಗತ್ಯ. 'ನಾಯಿಬಾಲ'ದಂತೆ ಚಿಕಿತ್ಸೆಗೊಳಪಟ್ಟವರು ಆಗಬಾರದು. ಚಿಕಿತ್ಸೆ ಊರುಗೋಲಿನಂತೆ ಆಸರೆಯ ರೂಪದಲ್ಲಿರಬೇಕೇ ವಿನಃ ಅವಲಂಬನೆಯ ಆಧಾರವಾಗಿರಬಾರದು.

**ಎ.ಎ.ಯ ಸಂದೇಶ:**

ರೈತನೊಬ್ಬ ದ್ರಾಕ್ಷಿ ಬೆಳೆಸಲು ಭೂಮಿಯನ್ನು ಹದಗೊಳಿಸಿದ. ಗೊಬ್ಬರ ಹಾಕಿದ. ಸಸಿಗಳನ್ನು ನೆಟ್ಟು ನೀರು

ಹಾಸಿದ. ರೋಗ ರುಜಿನಗಳು ಬಾರದಿರಲಿ ಎಂದು ಔಷಧಿಯನ್ನು ಸಿಂಪಡಿಸಿದ. ದ್ರಾಕ್ಷಿ ದೇಟು ಹಚ್ಚಹಸುರಿನ ಚಿಗುರೆಲೆಗಳನ್ನು ಬಿಟ್ಟಾಗ ಖುಷಿಪಟ್ಟ. ಗೊಂಚಲು ಗೊಂಚಲು ಬಿಡುವ ದ್ರಾಕ್ಷಿ ಹಣ್ಣಿನ ಕನಸು ಕಂಡ. ರೈತನ ಹೊಲದಲ್ಲಿ ಬೀಡುಬಿಟ್ಟಿದ್ದ ಅಸುರ ಇದನ್ನೆಲ್ಲಾ ವೀಕ್ಷಿಸುತ್ತಲೇ ಇತ್ತು. ಅದು ಒಂದು ದಿನ ರಾತ್ರಿ ನವಿಲನ್ನು ಕೊಂದು ಅದರ ನೆತ್ತರು, ಮಾಂಸ ಮಜ್ಜಾಲೆಯನ್ನು ದ್ರಾಕ್ಷಿ ಬಳಿಗೆ ಹಾಕಿತು. ದ್ರಾಕ್ಷಿ ಚೆನ್ನಾಗಿ ಬೆಳೆಯಹತ್ತಿತು. ಸ್ವಲ್ಪ ದಿನಗಳ ನಂತರ ರಾಕ್ಷಸ ಹುಲಿಯೊಂದನ್ನು ಕೊಂದು ದ್ರಾಕ್ಷಿ ಬಳ್ಳಿಗೆ ಹಾಕಿತು. ದಿನಗಳುರುಳಿದವು. ಕೋತಿಯೊಂದನ್ನು ಕೊಂದ ರಾಕ್ಷಸ ಅದನ್ನೆ ಗೊಬ್ಬರವನ್ನಾಗಿ ಬಳ್ಳಿಯ ಬುಡಕ್ಕೆ ಹಾಕಿತು. ಸ್ವಲ್ಪುದಿನಗಳ ನಂತರ ಹಂದಿಯನ್ನು ಕೊಂದ ರಾಕ್ಷಸ ಅದನ್ನು ಗೊಬ್ಬರವಾಗಿ ಬಳ್ಳಿಗೆ ಹಾಕಿತು. ಇದರಿಂದ ಸಕಲ ಸತ್ವಗಳನ್ನು ಪಡೆದ ದ್ರಾಕ್ಷಿ ಉತ್ಕೃಷ್ಟವಾಗಿ ಬೆಳೆಯಿತು. ರಾಕ್ಷಸ ಮಾಡಿದ ಕೆಲಸ ರೈತನಿಗೆ ಗೊತ್ತಾಗಲಿಲ್ಲ. ಕಣ್ಣು ಕುಕ್ಕುವ ಹಣ್ಣಿನ ಗೊಂಚಲು ಕಂಡ ರೈತ ಹಿರಿಹಿರಿ ಹಿಗ್ಗಿದ. ಮಾರುಕಟ್ಟೆಗೆ ಸಾಗಿಸಿ ಹಣ ಸಂಪಾದಿಸಿದ. ಆಸೆ ತೀರಲಿಲ್ಲ. ಮಾರುಕಟ್ಟೆಯಲ್ಲಿ ಮಾರಾಟವಾಗದ ಉಳುಕಲು, ಬಳುಕಲು, ಬಾಡಿದ, ಬತ್ತಿದ ಹಣ್ಣುಗಳನ್ನು ಬಟ್ಟೆ ಇಳಿಸಿ 'ಮದ್ಯ' ತಯಾರಿಸಿ ಖುಷಿಯಲ್ಲಿರುವ ಕೆಟ್ಟ ವಿಚಾರ ಅವನ ತಲೆಯಲ್ಲಿ ಮಿಂಚಿತು. ಕಾರ್ಯೋನ್ಮುಖನಾದ . . . .

ಇಲ್ಲಿಯವರೆಗೆ ಮೌನವಾಗಿದ್ದ ರಾಕ್ಷಸ ರೊಚ್ಚಿಗೆದ್ದಿತು. "ಹುಚ್ಚು ಮಾನವ . . . ನಿನ್ನ ಆಸೆಗೆ ಕಿಚ್ಚು ಹಚ್ಚು. ಮದ್ಯ ಮೊದಮೊದಲು ಖುಷಿ ಕೊಟ್ಟಂತೆ ಮಾಡಿ ತನ್ನ ಬುಟ್ಟಿಗೆ ನಿಮ್ಮನ್ನು ಹಾಕಿಕೊಳ್ಳುವುದು. ನಂತರ ನಿಮ್ಮ ದೌರ್ಬಲ್ಯದ ಸುತ್ತ ಗಸ್ತು ಹೊಡೆದು ಹೊರಬರದಂತೆ ಭದ್ರ ಕೋಟೆ ಕಟ್ಟಿ ಕತ್ತು ಹಿಚುಕುವುದು. ಮೊದಲನೆ ಪೆಗ್ ಹಾಕಿದಾಗ ನವಿಲಿನಂತೆ ಕುಣಿಸುವುದು. ಎರಡನೆಯ ಪೆಗ್ಗಿಗೆ ರೋಷ ರಕ್ತದಲ್ಲಿ ಹರಿಯುವಂತೆ ಮಾಡುವುದು. ಹುಲಿಯಂತೆ ಗುಡುಗಲು ಹಚ್ಚುವುದು. ಮೂರನೆಯ ಪೆಗ್ ಹಾಕಿದಾಗ, ಮಾನಸಿಕ ಸ್ಥಿಮಿತ ತಪ್ಪುವುದು. ಮರ್ಕಟದಂತೆ ಇತಿಮಿತಿಯಿಲ್ಲದೆ ಹಾರಾಡಿಸುವುದು. 'ಮಂಗ್ಯಾನ ಬುದ್ಧಿ' ಮಾನವನದಾಗುವುದು. ನಾಲ್ಕನೆ ಪೆಗ್ ಹಾಕಿದಾಗ ಹಂದಿಯಂತೆ ರಸ್ತೆಯ ಒಂದು ಬದಿಯಿಂದ ಇನ್ನೊಂದು ಬದಿಗೆ ಜೋಲಿ ಹೊಡೆಯುತ್ತ ಹೋಗಲು ಹಚ್ಚುವುದು. ಹಂದಿ ಹೇಸಿಗೆಯನ್ನು ಹುಡುಕುವಂತೆ ಮಾನವ ಏನನ್ನೋ ಹುಡುಕುವನು. ಗಟಾರದ ಹೊಲಸಿನಲ್ಲಿ ಬಿದ್ದು ಹಂದಿ ಹೊರಳಾಡಿದಂತೆ ಹೊರಳಾಡುವನು. ಅಮಲಿನ ಸುಳಿಯಲ್ಲಿ ಸಿಕ್ಕು ಒದ್ದಾಡುವನು. . . . . ಮಾನ ಮರ್ಯಾದೆ ಕಳೆದುಕೊಂಡು ಪ್ರಾಣ ಬಿಡುವನು. . . .

"ಎಚ್ಚರ". . . ನಿಮ್ಮ ಶತ್ರು "ಮಾದಕ ವಸ್ತುವಿನ ರೂಪದಲ್ಲಿ ಬಂದು ನಿಮ್ಮ ಮನೆ ಬಾಗಿಲು ತಟ್ಟಿದರೆ, ಬಾಗಿಲು ತೆರೆಯದಿರಿ. ಜೋಕೆ ! ತೆರೆದಿದ್ದೇ ಆದರೆ ನಿಮ್ಮ ಮನವನ್ನು, ನಿಮ್ಮ ಮನೆಯನ್ನೂ ನಾಶ ಮಾಡುವುದು ಖಂಡಿತ. " ಇದು ಸಮಾಜದ ಸದಸ್ಯರಿಗೆಲ್ಲಾ ಎ.ಎ. ಸಂಸ್ಥೆಯ ಸಂದೇಶ.

# ವ್ಯಸನಿಗಳಲ್ಲಿಯ ಲಕ್ಷಣಗಳು.

ಸೂಜಿಯಿಂದ
ಚುಚ್ಚಿಕೊಂಡ
ಗಂಟುಗಳು.



ಒಗ್ಗದಿರುವಿಕೆಯ
ಔಷಧಿಗಳು
ಬಿದ್ದ ಗಾಯಗಳು

ಕೈಯ ಊತ.





MIB—li

# ವ್ಯಸನಿಗಳಲ್ಲಿಯ ಲಕ್ಷಣಗಳು

ಕಾಮಾಲೆ (ಹಳದಿ ಕಣ್ಣು)



ಕಾಮಾಲೆ (ಹಳದಿ ಚರ್ಮ)
ಮತ್ತು ಸಿಗರೇಟಿನಿಂದ
ಸುಟ್ಟ ಗಾಯಗಳು.



## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧. ಕುಡಿತದ ಕೆಡಕುಗಳು

-ಎ. ಎಸ್. ನಿಡವಣಿ

೨. ಮಾನವ ಆರೋಗ್ಯ ಹಾಗೂ ರೋಗರುಜಿನಗಳು

-ವ್ಹಿ. ಪಿ. ದೇಶಮುಖೆ

೩. ಮುಪ್ಪು ಹಾಗೂ ಆರೋಗ್ಯ ಸಮಸ್ಯೆಗಳು

-ಆರ್. ಸಿ. ಅಗಡಿ

೪. ಚಟಗಳು, ರೂಢಿಗಳು ಮತ್ತು ಕ್ಯಾನ್ಸರ

-ಎಸ್. ಜೆ. ನಾಗಲೋಟಿಮಠ

೫. ಅಸ್ಥಮಾರೋಗ

-ಜಿ. ಎ. ಹಿರೇಮಠ

೬. ಶಿಕ್ಷಣದಲ್ಲಿ ಮೌಲ್ಯಬೋಧನೆಯ ಸ್ಥಾನ

-ಸುಶೀಲಾ ಜಿ. ದೇಸಾಯಿ

೭. ಅಕ್ಕನಾಗಮ್ಮ

-ಎಸ್. ಎಸ್. ಭೂಸರೆಡ್ಡಿ

೮. ನಮ್ಮ ಶಿಕ್ಷಣ ನಮ್ಮ ಸಂಸ್ಕೃತಿ

-ವ್ಹಿ. ಜಿ. ಮಾರೀಹಾಳ

೯. ಮಕ್ಕಳಲ್ಲಿ ಪ್ರಚಲಿತವಾದ ಮೂಢನಂಬಿಕೆಗಳು

-ಎಲ್. ಆರ್. ಹೆಗಡೆ

೧೦. ಗ್ರಾಮೀಣ ಜನತೆ ಹಾಗೂ ರಾಜಕೀಯ ಚಿಂತನೆ

-ಎಲ್. ಎಚ್. ಕಲ್ಮಠ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ